# ಸಂಗೀತ ಪುಷ್ಪಾಂಜಲಿ

ಮಲ್ಲಿಕಾ

ಗೀತರೂಪೇ ಸರಸ್ವತೀ
ಸರ್ವತ್ರ ಸಮಧಿಷ್ಠಿತೇ
ಪುಲಸ್ತ್ಯ ಪ್ರಿಯೇ ನಿತ್ಯಂ
ಮಾಂ ಪಾಹಿ ಸುರವಂದಿತೇ

॥ ಶ್ರೀ ಸರಸ್ವತಿ ಪಾದಾರ್ಪಣಮಸ್ತು ॥

# ಸಂಗೀತ ಪುಷ್ಪಾಂಜಲಿ

ಮಲ್ಲಿಕಾ

ಲಕ್ಷ್ಮೀ ಪ್ರಕಾಶನ
170, ಲ್ಯಾಂಗ್ ಫೋರ್ಡ್ ರೋಡ್
ಬೆಂಗಳೂರು–560 025

## ನಿವೇದನೆ

ಆಗಾಗ ಮನಃತರಂಗಗಳಲ್ಲಿ ತೇಲಿ ಬರುವ ಭಕ್ತಿಭರಿತ ಪದಪುಂಜಗಳನ್ನು ಜೋಡಿಸಿ ಭಕ್ತಿಭಾವಪೂಜೆಗಾಗಿ, ಧ್ಯಾನರಸರೂಪವಾಗಿ ಸಂಗೀತಗಳನ್ನು ಹಾಡಿರುವೆ. ಇವುಗಳಲ್ಲಿ ಪದಲಾಲಿತ್ಯವನ್ನಾಗಲೀ, ಛಂದೋಲಯಗಳನ್ನಾಗಲೀ, ರಾಗತಾಳಗಳನ್ನಾಗಲೀ ಗುರಿಯಿಟ್ಟುಕೊಂಡು ಸಂಗೀತಗಳನ್ನು ರಚಿಸಲಿಲ್ಲ. ಕೇವಲ ಭಗವಧ್ಯಾನವನ್ನು ತನುಮನಗಳಲ್ಲಿ ತುಂಬಿ ವಿರಚಿಸಿದ ಸಂಗೀತವಾಹಿ ಮಾತ್ರ. ನನ್ನ ಮನವ್ಪೋತು ಎದೆಯೋತು ಹಂಬಲಿಸಿ ದಿವ್ಯ ದರ್ಶನ ಮಾತ್ರವನ್ನೆ ಬಯಸಿದ ತನುಮನಗಳಿಗೆ ಹಿತಕರವಾಗುವಂತೆ ಹಾಡಿರುವೆ, ಶ್ರೀ ಭಗವಂತನ ದಿವ್ಯ ಪಾದ ಪದ್ಮಗಳನ್ನು ನೆನೆನೆನೆದು.

ಇವು ನಮ್ಮ ಹಾಡುವವರ ಮನವನ್ನು ತಣಿಸಬಲ್ಲವಾದರೆ ನನ್ನ ಶ್ರಮ ಸಾರ್ಥಕ ಎನ್ನುವೆ. ಅಂತಲೇ 'ಸಂಗೀತ ಪುಷ್ಪಾಂಜಲಿ' ಯನ್ನು ನಿಮ್ಮಗಳ ಕರಕಮಲಗಳಿಗೊಪ್ಪಿಸುವೆ.

ಪ್ರಜಾಪತಿ ಸಂವತ್ಸರದ ವೈಶಾಖ ಶುಕ್ಲ ಸಪ್ತಮಿ ಸೋಮವಾರ

ಮಲ್ಲಿಕಾ
೨೦–೫–೧೯೯೧

# ದೇವಿ ಸ್ತುತಿ

## ಮಹಿಷಾಸುರ....

ಮಹಿಷಾಸುರ ಮರ್ದಿನಿ ದೇವಿ ಚಾಮುಂಡೇಶ್ವರಿ
ಬೆಳಕು ಬಂದಿದೆ ನಿನ್ನರಮನೆಯ ಹೊಸ್ತಿಲಿಗೆ
ಏಳು, ಏಳಮ್ಮ ಬೆಳಗಾಯಿತು.

ರವಿಯ ಹೊಂಗಿರಣಗಳ ಮಾಲೆ ಬೆಚ್ಚಗೆ ಹರಡಿದೆ
ಮಹಿಸೂರು ನಗರಿಯ ಮೇಲೆ ಶಂಖ ನಗಾರಿ ಭೇರಿ
ಜಾಗಟೆ ಸುಮಂಗಳ ವಾದ್ಯಗಳು ಮೊಳಗುತಲಿವೆ
ಕೇಳಮ್ಮಾ ಎಲ್ಲೆಡೆಯ ಮಂಗಳ ಘೋಷವಾ
ಏಳು, ಏಳಮ್ಮ ಬೆಳಗಾಯಿತು. ||ಮ||

ಶ್ರೀಮನ್ಮಹಿಸೂರು ಎಚ್ಚೆತ್ತು ಮಿಗೆ ಗಡಿಬಿಡಿಯಲಿ
ದಿನಚರಿಯನಾಚರಿಸುತಿದೆ, ಆನೆವಾಗಿಲಿನಲಿ
ಗುಡಿಸಿ ಗೋಮಯಂ ತಳ್ದು ರಂಗೋಲಿಯನಿಟ್ಟು
ಆನಂದದಿಂದ ತಳಿರು ತೋರಣ ಕಟ್ಟಿಹರ್
ಏಳು, ಏಳಮ್ಮ ಬೆಳಗಾಯಿತು. ||ಮ||

ಸ್ತ್ರೀಕುಲ ಅಮಿತ ಸಂಭ್ರಮ ಸಡಗರಗಳಿಂದ
ಮುಂಬಾಗಿಲಲಿ ಮಂಗಳ ದ್ರವ್ಯಗಳ ಹರಿವಾಣದ
ಸಹಿತ ಕಾದಿಹುದು ನಿನ್ನ ದಿವ್ಯ ದರುಶನಕೆ.
ನಗರಿಯೆಲ್ಲ ಕರ ಜೋಡಿಸಿ ನಿಂದಿದೆ ಭಕ್ತಿಯಿಂದ
ಏಳು, ಏಳಮ್ಮ ಬೆಳಗಾಯಿತು. ||ಮ||

— ೦ —

# ಜಗಜ್ಜನನೀ....

ಜಗಜ್ಜನನೀ ಶಂಕರಿ ಶುಭಕರಿ ತವಪಾದ
ಪದ್ಮಗಳಲಿ ಹೊರಳಾಡುವೆ ಎನ್ನ ಕ್ಷೇಮಂಕರೀ
ಭಕ್ತಿಯಿಂ ಬೇಡುವೆ ವಿಭವೆ ನಿನ್ನಯ ಕರುಣೆಯ. ||ಜ||

ಶ್ರೀ ಜನನಿ ಎನ್ನಾತ್ಮವೇ ನೀನು, ಎನ್ನ ಮನ
ಮತಿಯು ನೀನು, ಎನ್ನೀ ಜೀವನದೊಡತಿಯು ನೀನು
ಎನ್ನಯ ಶರೀರವಿದು ನಿನ್ನಯ ಮಂದಿರ. ಎನ್ನ
ಸವಿ ನಿದ್ದೆಯು ನಿನ್ನ ಧ್ಯಾನದ ದಿವ್ಯ ಸಮಾಧಿ
ಎನಲೇಂ ಕೊರತೆಯೆನಗೆ ಎನ್ನ ಜನನಿಯೇ. ||ಜ||

ನಿನ್ನ ಧ್ಯಾನರಸದಲಿ ಮುಳುಗುವೆ ಹಗಲಿರುಳು
ನೀನದನರಿತು ಅಲಕ್ಷಿಸುವರೆ ತಾಯಿ ಅಖಿಲೇಶ್ವರೀ
ವೇದ ಶಾಸ್ತ್ರಪುರಾಣವಿಲ್ಲದ ಬಾಳಿನಲಿ
ನಿನ್ನ ಪದಕಮಲವಲ್ಲದ ಗತಿಯಿನ್ನುಂಟೇ
ನೀನೆನ್ನ ಸಲಹು ವರ ಪ್ರದಾಯಿನಿ ಜಗದೀಶ್ವರೀ ||ಜ||

— ೦ —

# ದೇವಿ....

ದೇವಿ, ದುರ್ಗೆ ನೆರೆ ನಂಬಿದೆನು ನಿನ್ನ ಪಾದವನು
ತಾಯೊಲುಮೆ ಇಲ್ಲದಿರೆ ಆನೆಂತು ತಾಳುವೆನು
ನೀನೇ ಮನವರಿತು ಕರುಣೆಯಿಂದ ರಕ್ಷಿಸು ಅನವರತ ||ದೇ||

ಕಂಡವರ ಮನೆ ಸೊತ್ತಾಗಿ ಮಿಗೆ ತೊತ್ತಾಗಿ
ಜೀವನ ಸವೆಸಿಹೆನು ಸಿರಿಗಂಧವ ತೇಯ್ದಂತೆ
ನಿನ್ನ ನೆನೆಯೆ ಬಿಡುವಿನ ಕ್ಷಣಗಳ ಕಾಣದಾಯ್ತು
ಎನ್ನ ಪರಮ ಜನನಿಯೇ ರಕ್ಷಿಸು ಅನವರತ ||ದೇ||

ನಿನ್ನಕ್ಕರೆಯ ಅಭಯ ಹಸ್ತದಾಶ್ರಯಮಿನಿತು
ಇಲ್ಲದಿರೆ ದುಃಖದ ಕಡಲನು ಹಾಯ್ವುದೆಂತು
ಭವ ಬಂಧನದಲಿ ನಿಂದೆಯೆ ಕೊಳು ದಿನ ನಿತ್ಯ
ಎನ್ನ ಬಾಳ ಬಂಧುವೆ ನೀನೇ ರಕ್ಷಿಸು ಅನವರತ ||ದೇ||

— ೦ —

ಶ್ರೀ ದೇವಿ ಮಹಾ ಮಾಯೆ ಸುರವರದೇ
ವಿರಾಟ್ ಭುವನ ಮಂಡಲೇ ವಿನುತೆ
ಮನೋಹರೆ ಸ್ತ್ರೀಜನ ಸಂಪ್ರೀತೇ
ತಾಯೇ, ನಮೋನಮೋ ತವಚರಣಕೆ. ||ಶ್ರೀ||

ವೇದ ಪ್ರಿಯಳೇ ಶಾಂತಿರಸ ಪ್ರೀತೆ
ಮಂಗಳ ದ್ರವ್ಯಾನ್ವಿತೆ ಸುಮಂಗಳೆ
ಧವಳ ವಸನೆ ವಜ್ರ ಕಿರೀಟ ಕುಂಡಲೇ
ತಾಯೇ ನಮೋ ನಮೋ ತವಚರಣಕೆ. ||ಶ್ರೀ||

ದಿವ್ಯ ಜ್ಞಾನಮಯೀ ಭವಾನಿ ಜನನೀ
ಸರ್ವೇಶ್ವರೀ ಸದಯಿ ಅಭಯದಾಯೀ
ತ್ರಿಶೂಲ ಪಾಣಿ ಶಾಂಭವಿ ಕಲ್ಯಾಣೀ
ತಾಯೇ ನಮೋ ನಮೋ ತವಚರಣಕೆ. ||ಶ್ರೀ||

— o —

## ಭವಾನೀ....

ಭವಾನೀ ಲಲಿತಾಂಬೆ ಜಗದಂಬೆ
ಶ್ರೀ ಶಂಕರೀ ನಿನಗೆ ನಮೋ ಎಂಬೆ

ಪರಮ ಕೃಪಾಮಯಿ ಸಕಲ ಜ್ಞಾನ
ದಾಯಕೀ ಎನ್ನ ಅಜ್ಞಾನ ಬಾಂಡವನು
ಒಡೆದು ಉರಿಸು ಜ್ಞಾನದ ಕಿಡಿಯನು
ಶ್ರೀ ಶಂಕರೀ ನಿನಗೆ ನಮೋ ಎಂಬೆ ||ಭ||

ಲೋಕದೊಳ್ ಜಾಗತಿಕ ಸತ್ಯದಿಂದೆ
ಉದ್ದೀಪಿತ ಜ್ಞಾನದ ರಾಶಿಯಿಂದು
ಕಾಣಲುಂಟೆ ಸ್ವಾರ್ಥ ಪರಮಾರ್ಥದಿಂದ
ಶ್ರೀ ಶಂಕರೀ ನಿನಗೆ ನಮೋ ಎಂಬೆ ||ಭ||

ಬದುಕಿನಲಿ ಸುಖ ಶಾಂತಿಗಳಿಲ್ಲ.
ಭಂಗ ಬನ್ನಗಳ ಬವಣೆಯಲ್ಲದೆ
ಬೇರಿಲ್ಲ. ನೀನೆ ಕರುಣೆದೋರೆನಗೆ
ಶ್ರೀ ಶಂಕರೀ ನಿನಗೆ ನಮೋ ಎಂಬೆ ||ಭ||

ಜಯಜಯ ಜಗನ್ಮಾತೆ ಸರೋಜ ಹಸ್ತೇ
ದೀನ ಜನೋದ್ಧಾರಿಣಿ ಪರಮದಾತೇ
ನಿನ್ನ ಪದಾಂಬೋಜಗಳಿಗೆ ವಂದಿಸುವೆ
ಭಕ್ತಿ ಭಾವದಿಂದ ಶ್ರೀಮಹಾ ಮಾತೇ

ಬಾರಮ್ಮ ತಾಯೇ ನಿನ್ನಯ ಮುದ್ದಿನ
ಮಕ್ಕಳ ಚೆಲುವಾಂತ ಚೆನ್ನಾಡಿಗೆ
ದೀನ ಜನರುದ್ಧರಣಕೆಂದು ತಳುವದೆ
ಬಾರಮ್ಮ ಬಾ ತಾಯೆ ಪರಮೇಶ್ವರೀ ||ಜ||

ದೇವೀ ಭುವನೇಶ್ವರೀ ಕೇಳೆನ್ನ
ಆರ್ತ ಮೊರೆಯ ಮಂದಮತಿಯು ನಾನು
ದೀನ ರಕ್ಷಕಿಯು ನೀನು. ನಿನ್ನನರಿತು
ಸೇವಿಸಲರಿಯೆ ಪೂಜಿಸಲರಿಯೆ ನಾನು
ನೀನೇ ರಕ್ಷಿಸೆಮ್ಮ ಅನವರತ. ||ಜ||

— o —

# ಜಯಕಾಳೀ....

ಜಯಕಾಳೀ ಜಯದುರ್ಗೇ ಜಯಜಯಹೇ
ಜಯ ಜಗಜ್ಜನನೀ ತ್ರಿಲೋಕಧಾರಿಣೀ
ಜಯಕಾಳೀ ಜಯ ದುರ್ಗೇ ಜಯ ಜಯಹೇ

ಸಹಸ್ರಾಕ್ಷಿಣೀ ಶತ ಸಹಸ್ರ ಭುಜಬಲ
ಧಾರಿಣೀ ಕೋಟಿ ಕೋಟಿ ಪ್ರಾಣಾನೀ
ಸುರಸುಂದರ ಶರೀರೇ ಮಾಶಕ್ತೇ
ಅಸಂಖ್ಯ ಧೀರ ಕರವೀರ ಭೂಷಿತೇ ||ಜ||

ಅಪ್ರತಿಮ ಧರ್ಮಕರ್ಮ ಸಂಘಶಕ್ತೇ
ದುರ್ಗಾ ವಿಪುಲ ಬಲಧಾರಿಣೀ ಮಾತೃಮಯಿ
ಶ್ರೀವಾಣಿ ಸುವಿದ್ಯಾ ಪ್ರದಾಯಿನೀ
ಘನ ಭಾಹುತೇ ಧೀರ ಪ್ರಮೋದಿನೀ ||ಜ||

ಸಸ್ಯ ಶ್ಯಾಮಲೇ ಸಕಲತರ ಖನಿಜ
ರತ್ನಧಾರಿಣೀ ಅಮೂಲ್ಯ ದೇವಾಲಯ
ಸಂಜೀವಿನೀ ವೇದ ಪರಿಮಳ ಭೋಗಿನೀ
ಯಾಮಿನೀ ಭಾಗ್ಯ ವಿದಾಯಿನೀ ||ಜ||

—o—

# ದೀನ ರಕ್ಷಕಿ....

ದೀನ ರಕ್ಷಕಿ ಮಾತಾಮಯೀ ಭವಾನಿ ಶಿವೇ
ನಿನ್ನ ಪದಾಂಬೋಜಗಳಿಗೆ ಶಿರವ ಬಾಗುವೆ.

ಭವಾಬ್ಧಿಯಲಿ ಬೆಂದು ಬಾಡಿ ತೊಳಲಿ ಬಳಲಿದೆ
ನೀನೆನ್ನ ಕಾಪಾಡು ಮಾಕಾಳಿ ಕರುಣೆಯಿಂದೆ ||ದಿ

ರೋಗಾದಿಬಾಧೆಗಳೊಂದು ಕಡೆ ನಿಂದೆಯ ಘೋರ
ದುಷ್ಟಗ್ರಹವಿನ್ನೊಂದು ಕಡೆ ಕುಟುಕುವ ಕರ್ನಾಗರ ||ದೀ||

ಪರರ ಮನೆಯನು ಕಾಯಲಾರೆ ನೋಯಲಾರೆ
ನಾಯ ಕುನ್ನಿಯಂತಾಯ್ತೆನ್ನ ಬದುಕಿನಾಗರ ||ದೀ||

ದೀನ ಜನೋದ್ಧಾರಿಣಿ ದೇವಿ ಜಗದೀಶ್ವರೀ
ನಿನ್ನ ಪಾದ ಸೇವೆಗೆ ಸಲಿಸೆನ್ನ ದಯೆದೋರಿ ||ದೀ||

ಕಾಲ್ವಿಡಿದು ನಿನ್ನ ಬೇಡಿಕೊಳ್ಳುವೆನು ಒಡಲಿನ
ಸಂಕಟವನೊರೆವ ಸರಿದಾರಿಯ ತೋರು ಜನನೀ ||ದೀ||

— o —

# ಜಗದೀಶ್ವರೀ....

ಜಗದೀಶ್ವರೀ ನೀನೆಂದು ನೆರೆನಂಬಿ ನಿನ್ನನಿಂದು
ಚೆಂದದಿಂದ ನಮಿಸಿ ಪೂಜಿಸಿ ಅತಿ ದೈನ್ಯದಿಂದ
ಬೇಡುತಿಹೆ ನೀ ಬಂದು ಸಲಹೆನ್ನ ದಯೆಯಿಂದ. ||ಜ||

ಲೋಕದೊಳ್ ನಿನ್ನಂಥ ಬಂಧುವೆನಗಿಲ್ಲ ತಾಯೇ
ಹಿಂದಣ ಜನುಮದಲಿ ಆರಿರ್ದರೊ ಆನರಿಯೆ
ಇಂದು ನೀನಿಲ್ಲದಿರ್ದೊಡೆನೆಗೆ ಗತಿಯಾರು ? ||ಜ||

ಫುಲ್ಲಲೋಚನೆ ಅರವಿಂದನಯನೆ ಸುರಸುಂದರೀ
ಲೋಕಮಾತೆ ನಿನ್ನ ಚರಣಾರವಿಂದಗಳಿಗೆ
ವಂದಿಸುವೆ ಸಾನಂದದಿಂದಲಿ ಶಿರವಂ ಬಾಗಿ. ||ಜ||

— ೦ —

# ಜಯತು ಜಯ....

ಜಯತು ಜಯ ಜಯ ಭುವನೇಶ್ವರೀ
ಜಯತು ಜಯ ಜಯ ಪರಮೇಶ್ವರೀ

ಹಲವಾರು ಬಗೆಯ ಛಂದಃಶಾಸ್ತ್ರವ
ತಿಳಿದರೇನು ? ವಿದ್ಯೆ ಬುದ್ಧಿಗಳಿರಲೇನು ?
ನಿನ್ನ ಧ್ಯಾನರಸವ ಪೀರದನಕ ?
ನೀನೇ ಗತಿ ಜಗಜ್ಜನನಿ ತ್ರಿಭುವನೇಶ್ವರಿ ||ಜ||

ನ್ಯಾಯ ಶಾಸ್ತ್ರವ ಅರಿತುಕೊಂಡರೇನು ?
ವೇದ ಪಾರಾಯಣವಗೈದಿರ್ದರೇನು ?
ಸಕಲ ವಿದ್ಯಾಪಾರಂಗತನಿರಲೇನು ?
ನಿನ್ನ ಭಕ್ತಿ ದ್ರವ್ಯ ಎದೆಯೊಳಿರದನಕ ? ||ಜ||

ಏನಿರ್ದರೇನು ? ನಿನ್ನರಿವಿಲ್ಲದನಕ ?
ಭವದ ವೈತರಣಿಯನು ನೀನಲ್ಲದೆ
ದಾಂಟಿಸುವವರಾರು ಪೇಳ್ ತಾಯೆ ?
ನೀನೇ ಗತಿ ನೀನೇ ಮತಿ ಜಗಜ್ಜನನೀ ! ||ಜ||

— ೦ —

## ನದಿ ತೊರೆ....

ನದಿ ತೊರೆಗಳೆಂತು ಸಾಗರದ ಪಥವಿಡಿದಪುದೊ
ಅಂತೆನ್ನ ಮನಃಚಿತ್ತಗಳು ನಿನ್ನಯ ಪಾದ
ಪದುಮಗಳ ಪಥವಿಡಿದು ಸೇರಲಿ ಗತಿ ತಪ್ಪದೆ.
ನಿನ್ನನುಳಿದು ಬದುಕುಂಟೆ ಎನಗೆ ಶ್ರೀರಮಣಿ
ತಾಯೆ ನಿನಗೆ ಸ್ಮರಣೋತ್ಸವ

ಹೇ ತಾಯೆ ನಿನ್ನ ದಯಾರ್ಮ್ರೇದುರ ಪ್ರೀತಿಯಲಿ
ಹರಸು ಬಾ ತಾಯಿ ನಿನ್ನ ಸಹಸ್ರ ನಾಮಗಳ
ಜಪಿಸಿ ಧ್ಯಾನಿಸಿ ಪೂಜಿಸುವೆನು ನೇಮದಲಿ
ಕರುಣಾಮಯಿ ನೀನಲ್ಲದಾರೆನಗೆ ಶ್ರೀರಮಣಿ
ತಾಯೆ ನಿನಗೆ ಸ್ಮರಣೋತ್ಸವ ||ನ||

ನಿನ್ನ ಮರೆತು ಜೀವಿಸಲುಂಟೇ ಈ ಲೋಕದಲಿ
ತಾಯೆ, ನೀನೆ ವ್ರತ, ನೀನೆ ನೇಮ, ನೀನೇ
ಶಕ್ತಿ ನೀನೇ ಎಲ್ಲ ಮಿರುತಿರೆ ನಿನ್ನನುಳಿಯುತೆ
ಜಗವುಂಟೇ ದೀನ ಮೊರೆಯಲಾಲಿಸು ಶ್ರೀರಮಣಿ
ತಾಯೆ ನಿನಗೆ ಸ್ಮರಣೋತ್ಸವ ||ನ||

— ೦ —

# ಅನುಗಾಲವು....

ಅನುಗಾಲವು ಭವ ಬೆಂಕೆಯಲಿ ಬೆಂದ
ನಮ್ಮ ಚಿತ್ತ ಮಂಡಲಕೆ ನೀನೊಂದು
ಪ್ರೇಮದ ಬಿಂದುವನು ಬಿತ್ತುತಿಂದು
ಶಾಂತಗೊಳಿಸು ಮಮ ಭುವನೇಶ್ವರಿಯೆ
ನಿನಗೆ ಪರಮ ವಂದನೆ

ನಿನ್ನ ಕಂದಮ್ಮಗಳನು ನೀನೇ
ಮುದದಿಂದ ಸಾಂತ್ವನಗೊಳಿಸು ತಾಯೀ
ನಿನ್ನ ಕರುಣಾರಸ ಸೇಚನೆಯಿಂದಲಿ
ಅರಳಿಸೆಲ್ಲರ ಮನವ ಮಮ ಜಗದೀಶ್ವರಿಯೆ! ||ಅ||

ತಾಯಿ ಜಗದಂಬೆ ಮಾತಾಮಯೀ
ಜ್ಞಾನದ ಬಡತನವೆನ್ನ ದಿನದಿನ
ದಿಕ್ಕು ತಪ್ಪಿಸಿ ಗತಿಗೆಡಿಪುದನುದಿನ
ನೀನೇ ಪರಾಮರಿಸು ಭುವನೇಶ್ವರಿಯೆ! ||ಅ||

ಜ್ಞಾನ ವಿಜ್ಞಾನದ ದಿವ್ಯ ಬೆಳಕಿನಿಂದ
ದೂರಾಗಿ ಮತಿಗತಿ ಹೀನತೆಯಿಂದ
ಸಾಗುತಿದೆ. ಜೀವನ ಬರೀ ಜೀವನಾ
ಕರುಣದಿ ಪರಿಪಾಲಿಸು ಜಗದೀಶ್ವರಿಯೆ! ||ಅ||

— ೦ —

# ಹಾಡು ಹಗಲೇ

ಹಾಡು ಹಗಲೇ ಜಾಡು ತಪ್ಪಿದೆ ಕಡು
ಕತ್ತಲೆಯ ಹಾದಿ ಹಿಡಿದು ತಾಯೀ,
ಪಾಹಿಮಾಂ ಪಾಹಿಮಾಂ ಪಾಹಿಮಾಂ

ಮುಂಬೆಳಕಿನ ಸಿರಿಯಿಲ್ಲ ಮುಂದಿನ
ಹಾದಿ ತೋರ್ವರಿಲ್ಲ. ಜಡಿ ಕತ್ತಲೆ ಕಣ್
ಕವಿಯುತಿದೆ ಮುಂಪಥವ ಕಾಣೆನಾ
ಭುವನೇಶ್ವರೀ ಅಭಯದಾಯೀ ಪಾಹಿಮಾಂ ||ಹಾ||

ಮಹಿಷಾಸುರ ಮರ್ದಿನಿ ಶಿಷ್ಟಜನ
ರಕ್ಷಕಿ, ದುಷ್ಟಜನ ಶಿಕ್ಷಕಿ....ನೀನೆನ್ನ
ಬಾಳಿನ ಪರಂಜ್ಯೋತಿ ಕರುಣೆಯಿಂದೆನ್ನ
ಮುನ್ನಡೆಸು ಭುವನೇಶ್ವರೀ ಪಾಹಿಮಾಂ ||ಹಾ||

— ೦ —

## ಜನುಮ....

ಜನುಮ ಜನುಮಕು ನಿನ್ನಯ ಸೇವೆಯು
ನಿಚ್ಚವಾಗುವಂತೆ ಅನುಗ್ರಹಿಸು ತಾಯೆ,
ಹೇ ಮಮ ಜನನೀ ಭುವನೇಶ್ವರಿಯೆ
ನಿನಗೆ ನಿತ್ಯ ಸನ್ಮಂಗಳೋತ್ಸವ

ನಿನ್ನ ನಾಮಾಮೃತ ರಸಪಾನವ
ಮಾಡಿ ಮನ ಮತ್ತತೆಯಲಿ ಬೇಡುವೆ
ಸಲಹೆನ್ನ ತಾಯೆ ಶಿವಾಣಿಯೇ
ನಿನಗೆ ನಿತ್ಯ ಸನ್ಮಂಗಳೋತ್ಸವ ||ಜ||

ನುಡಿವ ನುಡಿಗಳೆಲ್ಲ ನಿನ್ನಯ ಪದ
ತಲದಲಿ ಕುಸುಮಾರ್ಚನೆಯನೆ ಉರಿಸುವ
ಸಂಧ್ಯಾ ದೀಪವೇ ನೀಲಾಂಜನವು ಭವಾನಿಯೇ
ನಿನಗೆ ನಿತ್ಯ ಸನ್ಮಂಗಳೋತ್ಸವ ||ಜ||

— ೦ —

## ಜೈ ಗಣೇಶ....

ಜೈಗಣೇಶ ಜೈಗಣೇಶ ಜೈಗಣೇಶ
ವೀರ ವಿಜಯ ಗಣೇಶ ಜೈಗಣೇಶ

ಸಕಲ ವಿದ್ಯಾ ಪ್ರಬೋದಕ, ವಿಶ್ವ
ವಿಜೇತ ವಿನಾಯಕ, ಸತ್ ಚಾರಿತ್ರ್ಯ
ನಿಗಮ ಗಮ್ಯ ಪರಿಪುಣ್ಯ ಪುರುಷ
ಕೈಮುಗಿದು ಬೇಡುವೆ ಪರಿಪಾಹಿಮಾಂ ||ಜೈ||

ಗೌರೀ ಕುಮಾರ ಶ್ರೀಗಜಾನನ
ಭೂತ ಗಣಾದಿ ಸಂಸೇವಿತ ಮೂರ್ತೆ
ಜಂಬೂ ಫಲ ಸಾರ ಸುಪ್ರೀತಂ
ಕೈಮುಗಿದು ಬೇಡುವೆ ಪರಿಪಾಹಿಮಾಂ ||ಜೈ||

ಭಕ್ತ ಜನ ಸುಖದುಃಖಗಣ ಭಂಜನ
ಮುನಿಜನಗಣ ವಂದಿತ ಸಕಲ ವ್ರತ
ಆದಿಪೂಜಿತ ಸರ್ವೋತ್ತಮ ನಿತ್ಯ
ಕೈ ಮುಗಿದು ಬೇಡುವೆ ಪರಿಪಾಹಿಮಾಂ ||ಜೈ||

— ೦ —

# ಗೌರೀ ವರದ....

ಗೌರೀ ವರದ ಸುರ ಸುಂದರ ಚರಿತ
ಗಜಾನನ ಸಕಲಗಣ ಸಂಸೇವಿತ
ಶೋಕ ಸಂಕಟ ವಿನಾಶ ಗಣಪತೆ

ಭಾರತ ಭುವಿಯುಗಲ ತವ ಪವಿತ್ರ
ನಾಮ ಹರಡಿ ಹಬ್ಬಿದ ಸತ್ಪಾತ್ರ
ಸಕಲ ವಿದ್ಯಾ ನಿಪುಣ ಗಣಪತೆ. ||ಗೌ||

ನಿತ್ಯ ಆದಿ ಪೂಜಿತ ಲೋಕ ವಂದ್ಯ
ನಾಗ ಭೂಷಿತ ಏಕದಂತ ಪರಮೋಚ್ಚ
ಸಂಸ್ಕಾರ ರೂಪಿ ಕಡುಗಲಿ ಗಣಪತೆ ||ಗೌ||

— o —

# ದೇವಾಧಿದೇವ....

ದೇವಾಧಿದೇವ ವಿಶ್ವನೇತಾ
ನೀನೇ ಪಿತಾ ನೀನೇ ಪರಮದಾತಾ
ನಿನ್ನನೇ ನಂಬಿಹೆನು ರಕ್ಷಿಸೆನ್ನ

ಎಲ್ಲ ಧರ್ಮಗಳ ಮೂಲವು ನೀನೆ
ಸಕಲ ಪ್ರಾಣಿಗಳ ಜೀವ ಧನವು ನೀನೆ
ವಿಶ್ವದ ಪರಮಾಧಿಪತಿಯು ನೀನೆ
ಸೃಷ್ಟಿ ಸ್ಥಿತಿ ಲಯ ಕರ್ತನು ನೀನೆ
ನಿನ್ನನೆ ನಂಬಿದೆನು ರಕ್ಷಿಸೆನ್ನ ||ದೇ||

ನಿನ್ನ ಬ್ರಹ್ಮಾಂಡವನು ಕಣ್ತುಂಬ
ಕಂಡು ಕಾಣುತ ದೇವರೇ ಇಲ್ಲನೆಂಬ
ನಾಸ್ತಿಕತೆಯ ಮೊಂಡುವಾದದಿಂದ
ಒಡಲ್ತುಂಬುವ ಹುಂಬರನೇನೆಂಬೆ
ನಿನ್ನನೆ ನಂಬಿದೆನು ರಕ್ಷಿಸೆನ್ನ ||ದೇ||

— o —

# ಧರ್ಮನೀತಿ....

ಧರ್ಮ ನೀತಿಗಳಾವುದಾದರೇನು ?
ನಿನ್ನ ಸ್ಮರಣೆಯೊಂದಿರಲಿ ಎನ್ನ
ಮನ ಮತಿಗಳಲಿ ಶ್ರೀ ಪರಮಾತ್ಮನೇ !

ಮೂಢ ಮನಮತಿಗಳ ಚೋದನೆಯಿಂದ
ಸಾರವಿಲ್ಲದ ಬದುಕಿನಲಿ ನೆರೆ ಬೆಂದು
ಬೇಯುತಿಹೆ ರಕ್ಷಿಸು ಶ್ರೀ ಪರಮಾತ್ಮನೇ ! ||ಧ||

ಮೂಢಮತಿ ಘನಿಸಿ ಗಂಡಗರ್ವದಿಂದ
ಮುಂಪಥವ ಗೆಟ್ಟು ಬಳಲಿಹೆ ನಿಂದು
ನೀನಲ್ಲದಾರ ರಕ್ಷೆ ಶ್ರೀ ಪರಮಾತ್ಮನೇ ! ||ಧ||

— ೦ —

## ಒಡೆಯು....

ಒಡೆಯು ನೀನೆಂದರಿತರಿತು ನಿನ್ನ
ಧ್ಯಾನಿಸದೆ ದುರುಳನಾದೆನು ನಾನು
ಪಾಹಿಮಾಂ ಪರಿ ಪಾಹಿಮಾಂ

ಮಾಯಾ ಶಕುತಿಯದು ಶರೀರದಲಿ
ಅಡಗಿರಲು ನಿಜ ಮುಕುತಿದಾತನು ನೀನು
ನಿನ್ನ ಸಮಾನರಿನ್ನುಂಟೇ ? ನೀನೇ
ಕೈವಿಟ್ಟರಾರು ಗತಿ ಪೇಳೆನಗೆ
ಪಾಹಿಮಾಂ ಪರಿ ಪಾಹಿಮಾಂ ||ಒ||

ನಿನ್ನ ಸೂತ್ರದೊಳಾಡುವುವು ಸಕಲ
ಚರಾಚರಗಳೆಲ್ಲವು ನಿಯಮದಲಿ
ನೀನೇ ಎಲ್ಲಕು ಸೂತ್ರಧಾರನೆನೆ
ನಮಗೆಲ್ಲಿಯು ಸ್ವತಂತ್ರ ತಪ್ಪುಗೈಯೆ
ಪಾಹಿಮಾಂ ಪರಿ ಪಾಹಿಮಾಂ ||ಒ||

— ೦ —

## ರಕುತ....

ರಕುತ ಮಾಂಸದ ಬಿಗಿದ ರೋಮ ಕೂಪದ
ತೊಗಲ ಬೊಂಬೆಯು ನಂಬಿ ಜೀವನ ಬಂಧವ
ಕೈಕೊಂಡೊಡೆ ಗುರಿ ಮುಟ್ಟಲಹುದೇ ಪ್ರಭುವೇ !

ಅಕ್ಕರದ ಗಂಧವಿನಿತಿಲ್ಲದೆ ಬಾಳ್ದೋಣಿಯು
ಚುಕ್ಕಾಣಿ ಪಿಡಿದೊಡೆ ದುಕ್ಕದಕ್ಕರೆಯು
ಸಕ್ಕರೆಯಲ್ಲದೆಯು ಬೇರೇನಿಹುದು ಪ್ರಭುವೇ ! ||೨||

ತ್ರೈಗುಣಶೀಲ ನಿನ್ನನುಗ್ರಹವಿಲ್ಲದಿರೆ
ಕೀಲು ಮುರಿದು ಕಾಲಗತಿ ತಪ್ಪದಿರ್ಪುದೆ
ಘೋರ ಕಂದಕದಲುರುಳಿ ಬಿದ್ದಿಹೆ ಪ್ರಭುವೇ ! ||೩||

ಯೌವ್ವನ ಮದದಲಿ ಮರೆತೆ ನಾನಂದು ನಿಮ್ಮ
ಪದಾಂಬೋಜಂಗಳನು ಇಂದು ನೆನೆದು ಮರ್ಮರ
ಮರುಗುತಿಹೆ ದುಃಖ ಸಂಕಟವೊತ್ತಿ ಪ್ರಭುವೇ ! ||೪||

— ೦ —

ಊರು ಕೇರಿಗಳಿಲ್ಲ. ಎನ್ನವರೆನೆ
ಬಂಧು ಮಿತ್ರರಿಲ್ಲ. ಬಾರೆಂದು
ಕರೆದುಪಚರಿಸುವರಿಲ್ಲ. ನೀನರಿತು
ಪಾಹಿಮಾಂ ದೇವಾ ಪಾಹಿಮಾಂ

ಬೀಜ ವೃಕ್ಷಗಳಿಂದಾಯ್ತು ಲೋಕದಿ
ವೃಕ್ಷವಾರಿಂದಾಯ್ತು ಬೀಜ ವೃಕ್ಷ
ನ್ಯಾಯ ನಿನ್ನ ಬೇಧಿಸಲಾರದು
ಪಾಹಿಮಾಂ ದೇವಾ ಪಾಹಿಮಾಂ ||ಊ||

ಲೋಕದೊಳ್ ನಿಂದೆಗೊಳಗಾಗಿ ಮಿಗೆ
ಮನಗೆಟ್ಟು ಮುಂಗಾಣದಾಗಿಹೆನು
ಸುರರಾಜ ನಂದನ ನೀನಹುದು
ಪಾಹಿಮಾಂ ದೇವಾ ಪಾಹಿಮಾಂ ||ಊ||

— ೦ —

# ಗಣೇಶ ಸ್ತುತಿ

## ಪಾರ್ವತೀ....

---

ಪಾರ್ವತೀ ಕುವರ ಗಜವದನ ಗುರುವೇ
ಶರಣಾಗತರ ರಕ್ಷಿಪ ಪರಮ ಗುರುವೇ

ನಮಿಸುವೆನು ನಿನ್ನ ಪೂಜ್ಯ ಪ್ರಭುವೇ
ದುರಿತ ಕೋಟಿಗಳ ತೊಳೆದು ಆದರವ
ತೋರುವ ವಿಚಾರಶೀಲ ಸತ್ಪುರುಷನೆ ! ||ಪಾ||

ಷಣ್ಮುಖಪ್ರಿಯ ಮೂಷಿಕವಾಹನನೇ
ಭುಜಂಗ ಭೂಷಣ ವಿಶ್ವ ವಿಜೇತನೇ
ನೀತಿ ನಿಯಮಪಾಲಕ ಗಜವದನನೆ ! ||ಪಾ||

ಸಕಲ ಇಷ್ಟಾರ್ಥವನೀವ ಗಣಪತೆ
ದೀನಜನ ಸಂರಕ್ಷಕ ಶ್ರೀ ಗಣಪತೆ
ವಿಘ್ನವಿನಾಶ ನಿತ್ಯ ಪೂಜಿತ ಗಣಪತೆ ! ||ಪಾ||

— ೦ —

# ಜಯ್ ಗಜಾನನ....

ಜಯ ಗಜಾನನ ಜಯ್ ಜಯ್ ಗಜಾನನ
ವೀರ ವಿಕ್ರಮ ವಿಜಯ ವಿದ್ಯಾಧನ
ಪಾರ್ವತೀ ತನಯ ಮೂಷಿಕ ವಾಹನ
ವಂದಿಸುವೆನು ತವ ಪಾದ ಕಮಲಕೆ
ಜಯ್ ವಿನಾಯಕ ಜಯ್‌ಜಯ್ ಗಣೇಶ !

ಆದಿ ಪೂಜಿತ ತ್ರಿಲೋಕ ವಂದಿತ
ನಿತ್ಯ ವಿಘ್ನವಿನಾಶನ ಸರ್ವತ್ರ
ಸ್ಮೃತಿ-ಶೃತಿ ವಿಲೋಲ ವಿಶಾಲ ವಿಶ್ವೇಶ
ವಂದಿಸುವೆನು ತವ ಪಾದ ಕಮಲಕೆ
ಜಯ್ ವಿನಾಯಕ ಜಯ್‌ಜಯ್ ಗಣೇಶ ||ಜ||

ಸಕಲ ದುಃಖ ಕ್ಲೇಶಹರ ಸದ್ಗುಣ
ಸಂಪನ್ನ ವಿನಯ ವೀರ ವಿಕ್ರಮ.
ಸರ್ವಧರ್ಮ ದುರಂಧರ ವಿಶ್ವೇಶ
ವಂದಿಸುವೆನು ತವ ಪಾದ ಕಮಲಕೆ
ಜಯ್ ವಿನಾಯಕ ಜಯ್‌ಜಯ್ ಗಣೇಶ ||ಜ||

ಘೋರ ದುರಿತ ಗಣಗಳ ನಿವಾರಕ
ವೇದ ಶಾಸ್ತ್ರಜ್ಞ ವಿದ್ಯಾ ಪ್ರದಾಯಕ
ಎದೆ ತುಂಬಿ ಬೇಡುವೆ ಗಜವದನ
ಷಣ್ಮುಖ ಸೋದರ ಪರಿಪಾವನ ಮೂರ್ತೆ
ಜಯ್ ವಿನಾಯಕ ಜಯ್ ಜಯ್ ಗಣೇಶ ||ಜ||

— o —

# ಸರಸ್ವತಿ ಸ್ತುತಿ

## ಬಾ ತಾಯೇ....

ಬಾ, ತಾಯೇ ಶಾರದೆಯೆ ದಯೆದೋರಿ
ಬಾರೆನ್ನ ಹೃದಯ ಮಂದಿರಕೆ ಮೊಗವ ತೋರೆ

ವೀಣಾಪಾಣಿ ಸಕಲ ವಿದ್ಯಾದಿರಾಣಿ
ಅಜ್ಞಾನದ ನಿರ್ಜೀವ ಬಾಂಡವಿದೆನ್ನ
ಉಜ್ಜೀವನ ಗೊಳಿಸು ಬಾರೆನ್ನ ತಾಯೇ, ||ಬಾ||

ಇನ್ನೆಂತೆನ್ನಯ ಬದುಕು ಪೇಳೆನ್ನ
ಪರಮ ಜನನೀ ನೀನೇ ಬಂದೆನ್ನ
ನಡೆಸು ನಿನ್ನ ಕರುಣಾಶ್ರಯಕೆ ತಾಯೇ, ||ಬಾ||

ಹಗಲಿರುಳು ದೇಹ ನನೆದುದು ನೆರೆ
ನರಳಿ ನಿನ್ನನುಪಥವ ಕಾಣಲಾರದೆ
ಪುಡುಪುಡುಕಿ ಬಳಲಿ ತೊಳಲಿದೆ ತಾಯೇ, ||ಬಾ||

ನೀನಲ್ಲದಾರು ರಕ್ಷಕರೆನಗೆ
ಪರಮದಾತರಾರನು ನಾಕಾಣೆನೊ
ಈ ಧರಿತ್ರಿಯೊಳು ಜಗದೀಶ್ವರಿಯೇ ! ||ಬಾ||

— o —

## ಸರಸ್ವತಿ ಸ್ತುತಿ

### ಮಹಾಮಾತೆ....

---

ಮಹಾಮಾತೇ ಸರಸ್ವತಿ ಅಜಜಾಯೇ
ಶರಣಾಗತರ ಕರುಣೆಯಿಂದಲಿ ಕಾಯೇ
ಪ್ರಸನ್ನ ಮುಖಿ ದೇವೀ ಜ್ಞಾನದಾತೆ
ಶಾರದೇ ನಿನಗೆ ಪರಮ ವಂದನಂ.

ಲೌಕಿಕರ ದುರಿತ ದುಃಖ ದುಗುಡವ
ಪೋಗಾಡಿ ಬಲ್ಮೆಯಿಂ ವರವೀವ
ಪುಣ್ಯವತಿ ಮನಮೋಹನ ರೂಪಿಣಿ
ಶಾರದೇ ನಿನಗೆ ಪರಮವಂದನಂ ||ಮ||

ವಿದ್ಯಾರಾಣಿಯೆ ತವ ಪದದ್ವಯಗಳ
ಪೂಜಿಪೆನೆನೆ ಮಂಗಳ ದ್ರವ್ಯಗಳಿಲ್ಲ
ದೀನೆಯಾಂ ತರುವೆನೆಲ್ಲಿಂದ ಪೇಳ್ ?
ಶಾರದೇ ನಿನಗೆ ಪರಮ ವಂದನಂ. ||ಮ||

— o —

# ಶಾರದೇ....

ಶಾರದೇ ನಿನ್ನೊಲುಮೆ ಎನಗಿರಲಿ
ಬೇಡುವೆ ಶಿರವ ಮಣಿದು ತವ ಚರಣಗಳ
ನೀನೆನ್ನ ಕರುಣೆಯಿಂ ಪರಿಪಾಲಿಸು.

ಅಜ್ಞಾನದ ಕೋಟೆಯಲಿ ಮುಳುಗಿರೆ
ಬೆಳಕೀಯುವರ ಕಾಣೆನೀ ಭವದಿಯಲಿ
ಒಡಲ್ಗಿಚ್ಚಿನಿಂದುರಿದುರಿದು ತತ್ತ್ವಳ
ತುಳಿವರಿ ಎಲ್ಲ ತಾಯೇ ಪರಿಪಾಲಿಸು. ||ಶಾ||

ಬದುಕಿನಲಿ ಶಾಂತಿಯಿನಿತಿಲ್ಲ ರಣ
ಗೋಳಿನ ಬಾಳಿನಲಿ ಕರುಣೆಯಿಲ್ಲ ನಿನ್ನ
ಬೇಡುತಿಹೆ ಸುಖ ಸಂಪದವನೊಲ್ಲೆ
ದಿವ್ಯ ಸೇವೆಯನಿತ್ತು ಪರಿಪಾಲಿಸು. ||ಶಾ||

— ೦ —

## ಶ್ರೀಜನನೀ....

ಶ್ರೀ ಜನನೀ ಶಾರದೇ ಸುರವರದೇ
ಎನುತೆ ನಿರಂತರ ಧ್ಯಾನಿಸು ಮನವೇ.

ಗುಣ ಹೀನಳಾಗಿ ಕ್ರಿಮಿ ಕೀಟದೊಲ್
ಜ್ಞಾನ ಧನವಿಲ್ಲದೆಯೆ ಸಾಗೈದೆಲ್ಲ
ಘೋರ ಅಪರಾಧವನು ಕ್ಷಮಿಸು ತಾಯೇ ||ಶ್ರೀ||

ಮತಿಹೀನಳಾಗಿ ಅಕ್ಕರದಕ್ಕರೆಯು
ಮಿಲ್ಲದೆಯೆ ಗಾರಾಗಿ ಬಲು ನೊಂದಿಹೆ
ಕತ್ತಲೆಯ ಜಾಡಿನಲಿ ಸೆರೆ ಸಿಲುಕಿ. ||ಶ್ರೀ||

ಶ್ರೀ ಜನನೀ ಶಾರದೇ ಅಜಜಾಯೆ
ಕೈಮುಗಿದು ಕಾಲ್ವಿಡಿದು ಬೇಡುವೆ ತಾಯೆ
ಎನ್ನೊಡಲ ಸಂಕಟವ ಪರಿಹರಿಸು. ||ಶ್ರೀ||

— o —

## ಶಾರದೇ....

ಶಾರದೇ ವರದೇ ಶರಣು ತವ ಸನ್ನಿಧಿಗೆ
ಎನ್ನ ಸ್ಥಿತಿಗತಿಯ ಕಂಡು ಕಾಣುತಿಂತು
ಕೈ ಬಿಡುವರೆ ಕಮಲದಳಾಯತಾಕ್ಷಿ ಜನನೀ

ಬಂಧು ಬಳಗವೆನಗಿಲ್ಲ, ತಂದೆ ತಾಯಿಗಳಿಲ್ಲ,
ಕರೆದು ಆದರಿಪರಿಲ್ಲ. ಭವ ಬಂಧನದೊಳ್
ಕರ್ಮಕಾಂಡವೆನ್ನ ಅದುಮುತಿರೆ ಪಾತಾಳಕೆ
ನೀನಲ್ಲದಾರ್ ಪೊರೆಯುವರು ಎನ್ನ ತಾಯೇ ||ಶಾ||

ವಿದ್ಯಾಧಿದೇವತೆಯನುಳಿದು ಭವಧಿಯೊಳೆನ್ನ
ಬಾಳು ಬೆಳಗಲುಂಟೇ ಪೇಳಮ್ಮ ಮಮ ಜನನೀ
ನೀನೇ ಗತಿಯೆಂದು ಶಿರವ ಬಾಗಿ ವಂದಿಸುವೆನು
ಪರಿಪಾಲಿಸೌ ತಾಯೇ ಬ್ರಹ್ಮನ ಮನಃಪ್ರಿಯಳೇ ! ||ಶಾ||

ದೇಹರೋಗ ರುಜಿನಗಳ ಗೂಡಾಗಿ ಬಳಲಿರೆ
ದಿನವೊಂದು ಯುಗವಾಗಿ ಬದುಕು ಭಾರವಾಗಿ
ಬಾಳಲಾರದೆ ಬದುಕುತಿಹೆ ನರಕಕೆಣೆಯಾಗಿ
ಎನ್ನ ದೀನ ಮೊರೆಯನು ಲಾಲಿಸು ತಾಯೇ. ||ಶಾ||

— ೦ —

# ಶಿವಸ್ತುತಿ

## ಭವಭಯಹರ....

ಭವಭಯಹರ ಶಿವಶಂಕರ ಪಾರ್ವತೀ ರಮಣ
ತ್ರಿಲೋಕವಂದಿತ ನೆರೆನಂಬಿದೆ ತವಚರಣ
ಪರಿಪರಿಯಲಿ ಬೇಡುತಿಹೆ ನಿನ್ನಯ ದರ್ಶನ
ನೀಡಿ ಕರುಣದಿಂದ ಉದ್ಧರಿಸೆಮ್ಮ ಜೀವನ

ಕನಕ ಕಾಂಚನಗಳ ಬೇಡಲಿಲ್ಲ. ಸುಖಭೋಗವ
ಕೇಳಲಿಲ್ಲ. ನಿನ್ನಯ ಚರಣಗಳ ದಿವಿನಾದ
ಸೇವೆಯನು ಕರುಣಿಸು ಮುಕ್ತ ಮನದಿಂದಲಿ
ನಮಿಸುವೆ ನಿನಗೆ ಜಗದೋದ್ಧಾರ ಶ್ರೀ ಶಂಕರ! ||ಭ||

ಘೋರ ನರಕವೀ ಬೆಳಕಿಲ್ಲದ ಜಡ ಬದುಕು.
ತಾಳಲಾರದೆ ಬೇಡುವೆ ನಿನ್ನ ವರ ಚಮಕು.
ಈಗಲೋ ಆಗಲೋ ಬಿದ್ದು ಹೋಗುವ ತನು
ನಿನ್ನ ಸೇವೆಗಲ್ಲದೆ ಬೇರೆ ಗತಿಯುಂಟೆ ಶಿವನೆ! ||ಭ||

— ೦ —

# ವಿಭುವೆ....

ವಿಭುವೆ, ಪೂರ್ವಜನ್ಮದ ಪುಣ್ಯಫಲಗಳಲ್ಲಿ,
ನಿನ್ನ ಕರುಣೆಯ ಘನ ವೈಭವದಲ್ಲಿ,
ನಾನ್ನೈದೆ ಮನುಕುಲದ ಕೀರ್ತಿ ಮುಳಿಸೆ
ಅರ್ಥಹೀನ ಬಾಳಿಗೆ ವ್ಯರ್ಥ ಜನ್ಮವಾಗಿ
ಜಗನಿಯಂತೃವೆ ನಿನಗೆ ಮಂಗಳೋತ್ಸವ

ವಿಧಿ ಬರೆದ ಬರೆಹ ಪೆಣ್ಣ ಹಣೆಯಲ್ಲಿ
ಪಾಪಿಯೈಸಲಿರೆ ಆನೇಂಗೈವೆ ವಿಭುವೆ ?
ನಿನ್ನ ಕೃಪಾ ಕಟಾಕ್ಷ ಹರಿದು ಬಂದಲ್ಲಿ
ದುರಿತದೂರ ಭಂಗದೂರ ಶಿವನೇ
ಜಗ ನಿಯಂತೃವೆ ನಿನಗೆ ಮಂಗಳೋತ್ಸವ ||ವಿ||

ಹೊಲವು ತಪ್ಪಿದೆನ್ನ ಭುಜಬಲವು
ನೀರಿಲ್ಲದ ಸಸಿಯಂತೆ ಬಾಡಿಹುದು
ನೀನಿಲ್ಲದ ಜಗವುಂಟೆ, ನಿನ್ನದೆ ಎಲ್ಲ
ನೀನೆ ಬಲವು ನೀನೆ ಧಾತೃವು ವಿಶ್ವಕೆ
ಜಗನಿಯಂತೃವೆ ನಿನಗೆ ಮಂಗಳೋತ್ಸವ ||ವಿ||

— o —

# ಬಹುಭಾರ....

ಬಹುಭಾರ ಕರ್ತನು ನೀನು. ಲೋಕದ
ಸಂಸಾರವೇ ನಿನ್ನದು. ಹುಲು ಜನರ
ಭಂಗವರಿತುಕೊಳ್ಳಬಾರದೆ ಶಿವ ಶಂಕರಾ !

ನಿನ್ನಂತೆ ಮುಕ್ತಿಯ ನೀವರಾರು ?
ಭವದೊಳಗೆ ಕಂಡುಕಂಡು ನೀಯೆನ್ನ
ಕೈ ಬಿಡಬಹುದೇ ಕರುಣಾಳು ಶಿವ ಶಂಕರಾ ! ||ಬ||

ಮಂದಮತಿಯಲಿ ಮರೆತು ನಿನ್ನಿರುವನು
ಮುಂಗಾಣದೆ ತೊಳಲಿ ಬಳಲಿ ದಿನದಿನ
ನರಳುವೆ ರಕ್ಷಿಸೆಮ್ಮ ಶಿವ ಶಂಕರಾ ! ||ಬ||

ಅಂದಿನಿಂದ ನಿನ್ನ ನನ್ನಿಯನರಿಯದೆ
ನಿನ್ನಡಿಗಳ ಧ್ಯಾನಿಸದೆ ನಾನೇ
ದುರುಳನಾದೆ ರಕ್ಷಿಸು ಶಿವ ಶಂಕರಾ ! ||ಬ||

— ೦ —

## ಓಂ ಶಿವಾಯ....

ಓಂ ಶಿವಾಯ ಓಂ ನಮೋ ಶಿವಾಯ
ನಿನಗೆ ಶರಣು ಶರಣೆಂದು ಮಣಿಯುವೆ.

ಶಿವನಾಮಾಮೃತ ಸಿಕ್ತವಾದೆನ್ನ ಚಿತ್ತ
ಮನ ಮತಿಗಳಿಗೆ ಭಕ್ತಿ ಮುದ್ರೆಯನೊತ್ತಿ
ಅಜ್ಞಾನ ತಿಮಿರವ ಜಡಿ ಕುಟ್ಟು ವಿಭುವೇ ! ||ಓಂ||

ಶಿವಧ್ಯಾನದ ಕಡಲಲಿ ಮುಳುಗೆದ್ದು
ಮೈಮರೆಯೆ ದುರಿತವೆಲ್ಲವು ಬಿದ್ದು
ಹೋಗವೇ ತರಗೆಲೆಗಳ ತೆರದಲಿ ||ಓಂ||

ಓಂ ಪಾರ್ವತೀ ರಮಣ ಭಜಿಸುವೆ ತವ
ಚರಣ ಶ್ರೀ ಶಿವಶಂಕರ ಶುಭಕರ
ಪರಮಾನಂದ ಪರಶಿವ ಪರಮೇಶ ! ||ಓಂ||

— ೦ —

# ನಾರಾಯಣಸ್ತುತಿ

## ಯಾದವ ಗಿರಿ....

ಯಾದವ ಗಿರಿ ಶಿಖರದ ಮೇಲೆ
ಸಡಗರಿಸಿದುದು ರವಿಕಿರಣಮಾಲೆ
ತವದಯಾಬ್ಧಿ ಹರಿಸಿದ ಲೀಲೆ
ಏಳು ಏಳಯ್ಯಾ ನಾರಾಯಣನೆ
ಬೆಳ್ಳನೆ ಬೆಳಗಾಯಿತು.

ಮೇದಿನಿಗೆ ನೀನೇ ಪ್ರಪ್ರಥಮಾಧಿಕ
ನಾರಾಯಣಾಧಿಕಾರಿ ಇರುವತನಕ
ತ್ರಿಲೋಕ ಧರ್ಮದ ಸೂತ್ರಧಾರಕ
ಏಳು ಏಳಯ್ಯ ನಾರಾಯಣನೆ
ಬೆಳ್ಳನೆ ಬೆಳಗಾಯಿತು. ||ಯಾ||

ನಿನ್ನ ಕೃಪಾ ಕಟಾಕ್ಷವಿಲ್ಲದೆ
ಅಲುಗವು ಅಣುತೃಣಗಳು ಲೋಕದಿ
ನೀನೇ ಸೃಷ್ಟಿ ಸ್ಥಿತಿ ಕರ್ತನಿರುತಿರೆ
ಏಳು ಏಳಯ್ಯ ನಾರಾಯಣನೆ
ಬೆಳ್ಳನೆ ಬೆಳಗಾಯಿತು ||ಯಾ||

— o—

# ಮುಂಬೆಳಕು....

ಮುಂಬೆಳಕು ಮೂಡುತಿದೆ ಸಂಭ್ರಮದೊಳ್
ಧಾರಿಣಿಗೈದಿತು ಚಳಚಳಿಸಿ ಬೆಳಕಿನ ಛವಿ
ಏಳು ಶ್ರೀ ಲಕ್ಷ್ಮೀರಮಣ ನಾರಾಯಣ
ಏಳು ಏಳಯ್ಯ ಬೆಳಗಾಯಿತು.

ಭಕ್ತ ಜನ ಪರಿಪಾವನಾ ಶಿಷ್ಟಜನ
ಸಂರಕ್ಷಣಾ ಅಗಣಿತ ಘನಮಹಿಮ ನಿತ್ಯ
ಜನಾರ್ಚನಾ ಸರ್ವೇಶ ವಂದಿಸುವೆನು
ಏಳು ಏಳಯ್ಯ ಬೆಳಗಾಯಿತು. ||ಮುಂ||

ತ್ರಿಲೋಕ ವಂದಿತ ಸರ್ವೋತ್ತಮ
ಸರಸೀರುಹಾಕ್ಷ ಸುಂದರಾಂಗ ವಿಠಲ
ನೀನಿಲ್ಲದನ್ಯತ್ರವಿಲ್ಲ ಕೈ ಮುಗಿವೆ
ಏಳು ಏಳಯ್ಯ ಬೆಳಗಾಯಿತು. ||ಮುಂ||

ಹಾಡುತಿವೆ ಪಕ್ಷಿಗಳು ಸುಪ್ರಭಾತವ
ಕೇಳಯ್ಯ ಮಂಗಳ ರಾಗದ ಧ್ವನಿಯಾ
ತಣ್ಣನೆ ತಂಗಾಳಿಯು ನಮೋ ಎನುತಿದೆ
ಏಳು ಏಳಯ್ಯ ಬೆಳಗಾಯಿತು ||ಮುಂ||

ರವಿಬಿಂಬ ಬಾನೇರಿ ಉಜ್ವಲಿಸುತಿದೆ
ಜಗತ್ಕಾರಣ ಕಾದಿಹುದು ಕಾತರದಿಂದ
ದಾನವ ವೈರಿ ದೀನ ರಕ್ಷಕ ತಲೆಮಣಿವೆ
ಏಳು ಏಳಯ್ಯ ಬೆಳಗಾಯಿತು. ||ಮುಂ||

— ೦ —

# ದುಷ್ಟ ಆಶಾ....

ದುಷ್ಟ ಆಶಾಪಾಶಗಳಿಂದೆನ್ನನು ಬಿಗಿದು
ನಿನ್ನ ದಿವ್ಯ ಸ್ಮರಣೆಗೆ ತಿಲಾಂಜಲಿ ಸುರಿದೆ
ಎನ್ನ ಮನಮತಿಗಳ ದಿಕ್ಕೆಡಿಸಿ ಕಾಡುತಿಹೆ
ಇನ್ನು ನೀನಲ್ಲದಾರೆನಗೆ ದೇವರ ದೇವ.

ಕಂಡವರ ಮನೆಯ ಬಾಗಿಲನು ಕಾಯುವುದಾಯ್ತು
ತುತ್ತು ಕೂಳಿಗಾಗಿ. ಮತ್ತೆನ್ನ ತುಂಡು ವಸನಕಾಗಿ.
ಪರಮಾತ್ಮ ನಿನ್ನ ಧ್ಯಾನಕಿಲ್ಲದ ಬದುಕಿದು
ಇನ್ನು ನೀನಲ್ಲದಾರೆನಗೆ ದೇವರ ದೇವ. ||ದು||

ಮತಿ ಭ್ರಾಂತಿಯಲಿ ಜ್ಞಾನದ ದಿವ್ಯ ಬೆಳಕಿನ ಪಥ
ತಪ್ಪಿ ಕಾಮಕಾಮನೆಗಳ ಕಟ್ಟಡವಿಯಲ್ಲಿ
ಅನಲೆಯುತಿಹೆನೇಕಾಂಗಿ ತವ ನೀಡನರಿಯದೆ
ಇನ್ನು ನೀನಲ್ಲದಾರೆನಗೆ ದೇವರ ದೇವ. ||ದು||

— o —

# ಓ ಭಗವದ್ಬಂಧು....

ಓ, ಭಗವದ್ಬಂಧು ! ಬರುವೆಲ್ಲ ಭಂಗವು
ಎನ್ನ ಮೇಲ್ಮೆಗೆಂದು ನಂಬಿದೆ ನಿನ್ನ.
ದಿನ ನಿತ್ಯ ನಿನ್ನ ಪೆಸರಿನ ಮಾಲೆ
ನಲಿಯಲೆನ್ನ ನಾಲಿಗೆಯ ಮೇಲೆ
ನೀನೊಮ್ಮೆ ಬರುವೆಯಾ ಸಂತೈಸಲೆನ್ನ ?

ಓ, ದಯಾಸಿಂಧು ! ದುಃಖದಳಲು
ಕೊರಳೊತ್ತಿ ಬಿಗಿಯುತಿರೆ ಬಿಟ್ಟೆನೇಂ
ನಿನ್ನಯ ದಿವ್ಯ ನಾಮೋಚ್ಚಾರಣೆಯ ?
ಕಿವಿ ಕಿಡಿಸುವಂತೆ ನುಡಿಯುತಿದೆ ಬಡದನಿ
ನೀನೊಮ್ಮೆ ಬರುವೆಯಾ ಸಂತೈಸಲೆನ್ನ ||ಓ||

ನೆ ವರಂ ಮನಮತಿಗಳ ಶುಚಿಗೆಂದು
ಒದವಿ ಬಂದ ಬನ್ನಗಳೆಲ್ಲ ನಿನ್ನ
ಪ್ರಸಾದವೆಂದು ಬಗೆದು ನೆನೆವೆ ನಿನ್ನ
ಅನುದಿನವು ಎಡೆವಿಡದ ಪರಿಯಲ್ಲಿ
ನೀನೊಮ್ಮೆ ಬರುವೆಯಾ ಸಂತೈಸಲೆನ್ನ ||ಓ||

— ೦ —

## ನಾರಾಯಣ....

ನಾರಾಯಣ ನಾರಾಯಣ ನಾರಾಯಣ
ಶ್ರೀಮನ್ನಾರಾಯಣ ಎನು ಮನವೇ,
ಎದೆಯ ಹೊಂಗೊಡ ಭಕ್ತಿರಸದಿಂದಲಿ
ತುಂಬಿ ಕೋಡಿ ಹರಿಯುವ ರೀತಿಯಲಿ.

ಮನಮತಿಯಲಿ ಅಜ್ಞಾನವ ಜಡಿತುಂಬಿ
ಗುಣ ಹೀನ ಗೊಳಿಸಿದೆಯಲ್ಲ ಪ್ರಭುವೇ !
ಸಕಲ ದೋಷವ ಹೊತ್ತು ನಿನ್ನ ಪಾದವ
ತೊಳೆಯುವೆ ಶ್ರೀಮನ್ನಾರಾಯಣನೇ ! ||ನಾ||

ಬಾಳ ಗವಿಯ ಕಡು ಕತ್ತಲೆಯಿಂದ
ಮುಂಬೆಳಕಿಗೆ ನಡೆಸು ಅನುಗಾಲವು
ಬೆಂದು ಬಳಲಿದೆನಗೆ ತವ ಪ್ರೇಮದ
ಬಿಂದುವೊಂದನ್ನಾದರೂ ಚಿಮುಕಿಸು ||ನಾ||
ಶ್ರೀಮನ್ನಾರಾಯಣನೇ !

— o —

# ತನುಮನಗಳು....

ತನುಮನಗಳು ನಿನ್ನವು ಧನಮಾನವು
ನಿನ್ನದು. ನಿನ್ನುಳಿದೇನಿಹುದು ಎನ್ನಲಿ?
ನೀನೇ ಪರಾಮರಿಸು ಪರಮಾತ್ಮನೇ!

ನೀರ ಮೇಲಣ ಗುಳ್ಳೆಯಂದದಲಿಹ
ಕ್ಷಣಿಕ ಬಾಳಿನಲಿ ಸೆರೆಸಿಲ್ಕಿ ನಿನ್ನನು
ದೂರೀ ಕರಿಸುವರೇನ್ನೈ ಪರಮಾತ್ಮನೇ! ||ತ||

ಎನ್ನ ಮೊರೆಯುನಾಲಿಪ ನಿನ್ನಂಥ
ಬಂಧುಗಳಾರಿಹರೆನಗೆ ನೀನೆನ್ನ
ರಕ್ಷಿಸು ಅನವರತ ಪರಮಾತ್ಮನೇ! ||ತ||

ಲೋಕದೊಳ್ ನಿಂದೆಗೊಳಗಾಗಿ ನೆರೆ
ನೊಂದು ನಿನ್ನ ಮೊರೆ ಹೊಕ್ಕಿರುವೆನ್ನೈ
ದಯೆಗೈದು ಬಾರಯ್ಯ ಪರಮಾತ್ಮನೇ! ||ತ||

ಎನ್ನ ಬರಡು ಬಾಳಿಗೆ ಬೆಳಕನಿತ್ತು
ನೊಂದ ಮನಕೆ ಸಾಂತ್ವನವನು ನೀಡಿ
ಮುಕ್ತಿಯನು ನೀಡೆನಗೆ ಪರಮಾತ್ಮನೇ! ||ತ||

— ೦ —

# ಎನ್ನ....

ಎನ್ನ ಅಂಗೋಪಾಂಗದಲಿ ನಿನ್ನ
ನಾಮ ಮುದ್ರೆಯನೊತ್ತಿ ನಿತ್ಯ
ದಿವ್ಯ ಸ್ಮರಣೆಯಲಿರಲಾನು ನೀ
ಬಂದೆಯಾ ಎನ್ನನುದ್ಧರಿಸೆ ದಯೆ
ಕರುಣೆಗಳ ಅಮೂಲ್ಯ ನಿಧಿಯಾಗಿ. ||೧||

ನೀನೇಕೆ ನಿಷ್ಕರುಣಿ ತ್ರಿಲೋಕ
ಪೊರೆವ ಶಕ್ತಿ ಇರುತಿರೆ ಎನ್ನಂಥ
ಅಣು ತೃಣವ ಕಡೆಗಣಿಸುವರೇನೈ
ನೀನಹುದು ಭಗವಂತ, ಭಕ್ತಜನ
ಪರಾಧೀನ ಮತ್ತೇಕಿಂತು ಅಸಡ್ಡೆ ? ||೧||

ನಾನಿನ್ನರಮನೆಯ ಚಿರದಾಸಿಯಿರೆ
ಬಯಸುವೆನು ದೇವ ! ಪರಾಮರಿಸೆನ್ನ
ಬಯಕೆಯನು ಕಡೆಗಣಿಸದೆಯೆ. ನಿನ್ನ
ಪಡಸಾಲೆಯ ಮೂಲೆಯಲಿ ತಾವಿತ್ತು
ಉದ್ಧರಿಸು ಶ್ರೀ ಪುರುಷೋತ್ತಮನೇ ! ||೧||

— ೦ —

## ನೀನಲ್ಲದೆ....

ನೀನಲ್ಲದೆ ಇನ್ನೊಬ್ಬರುಂಟೇ ಈ ಜಗದೊಳ್
ಕಾಮಿತ ಫಲವನೀವ ಘನಮಹಿಮ ಪ್ರಭುವೇ
ನಾನಿನ್ನನುಗಾಲವು ನಮಿಸಿ ನುತಿಸುವಂತೆನ್ನ
ಚಿತ್ತವನನುಗೊಳಿಸು ಹೇ ಪರಮದಯಾ ಸಿಂಧು ! ||ನೀ||

ಸಂಸಾರ ಸಾಗರದಲ್ಲಿ ಆವೊಂದು ಗುಣಗಣ
ಮಹಿಮೆಗಳ ಕಾಣದೆ ಪುಡುಕಿ ಸೋತು ಬಳಲಿದೆನೈ
ನಿನ್ನ ನಾಮಸ್ಮರಣೆ ಮಾತ್ರ ಬಲಿಯುವಂತೆನ್ನ
ಚಿತ್ತವನನುಗೊಳಿಸು ಹೇ ಪರಮದಯಾಸಿಂಧು ! ||ನೀ||

ಎನ್ನ ದೀನ ಮೊರೆಯು ಕಿವಿಗೊಟ್ಟು ಲಾಲಿಸೈ
ದುಃಖ ಸಂಕಟ ಹರಣ ನಿಗಮಗೋಚರ ನಿನ್ನ
ಪಾದ ಪದುಮಗಳ ವರ ಪೂಜೆಯಂ ಬಯಸುವಂತೆನ್ನ
ಚಿತ್ತವನನುಗೊಳಿಸು ಹೇ ಪರಮದಯಾಸಿಂಧು ! ||ನೀ||

— o —

## ತುಳಸಿ ಸ್ತುತಿ

## ಭಕ್ತ ಜನ....

---

ಭಕ್ತಜನ ಮಾನಿನಿ ಶ್ರೀ ತುಳಸಿಯೇ
ಮಂದರೋದ್ಧರನ ಮನಃಪ್ರಿಯಳೇ
ಪರಮ ಪವಿತ್ರ ಸಸ್ಯ ರೋಹಿಣಿಯೇ
ನಮಿಸುವೆನು ನಿನ್ನ ಪಾವನ ಮೂರ್ತೇ. ||ಭ||

ಶ್ರೀಲಲಿತೆ ಜಗದಾಂಬೆ ಶರಣೆಂಬೆ
ಜಗನ್ಮಾತೆ ಈರೇಳು ಧಾರಿಣಿಯೊಳ್
ನೀನೇ ಮಾತೆ ಶಕ್ತಿದಾತೆ ಶರಣೆಂಬೆ
ವಿಷ್ಣು ದಯಿತೇ ಅನುರಾಗಿಣಿ ಮೂರ್ತೇ. ||ಭ||

ಉದ್ಧರಿಸು ಪಾಮರರನು ಕರುಣದಿ
ದುಃಖಿತರ ಕಂಬನಿಯ ನೀ ತೊಡೆದು
ಭಂಗ ಬನ್ನಗಳ ಹರಿಸಿ ತ್ರಿಲೋಕ
ಶಾಂತಿ ಲಹರಿಯನು ಹರಿಸುವ ಮೂರ್ತೇ. ||ಭ||

— ೦ —

## ತಾಯೆ....

ತಾಯೆ, ಕೃಪಾಕರಿ ತುಳಸೀದೇವಿ
ಶ್ರೀಕೃಷ್ಣನ ಹೃದಯ ಪ್ರಿಯಳೇ
ನಮಿಪೆನು ನಿನಗೆ ಶ್ರೀ ತುಳಸಮ್ಮಾ. ||ತಾ||

ಸರ್ವರೋಗ ನಿವಾರಿಣಿ ಶ್ರೀ ಜನನೀ
ಗೃಹಿಣಿಯರ ಮನೋ ವಿಹಾರಿಣೀ
ದೇವೀ ಪರಮ ಕಲ್ಯಾಣಿ ಶಂಕರಿ
ಭೂತಳದೊಳ್ ಅಚ್ಚರಿಯ ಕೀರ್ತಿಮಯಿ. ||ತಾ||

ಪೊಗಳಲಳವೇ ನಿನ್ನಯ ನಾಮದ
ಸುಗುಣ ಸಚ್ಚಾರಿತ್ರ್ಯ ಕಥಾನಕವ ?
ವೇದ ಶಾಸ್ತ್ರ ಪುರಾಣ ಪುಣ್ಯವತಿ
ನಿನ್ನ ಪದತಲಕೆ ನಮಿಸುವೆ ತಲೆಬಾಗಿ ||ತಾ||
ಶ್ರೀ ತುಳಸಮ್ಮ.

— o —

## ಶಾರದಾದೇವಿ ಸ್ತುತಿ

## ನಮಿಸುವೆನು....

ನಮಿಸುವೆನು ನಮಿಸುವೆನು ನಮಿಸುವೆನು
ಭಯಭಕ್ತಿಯಲಿ ತವಚರಣಕೆ ತಾಯೇ
ಶ್ರೀ ರಾಮಕೃಷ್ಣರ ಮನಪ್ರಿಯಳೇ
ಭಕ್ತಜನ ಪರಿಪಾಲಿನಿ ಮಮ ಜನನೀ !

ಭಕ್ತಿಯೋಗದಲಿ ಜಗಮರೆತು ಭವ
ಬಂಧನಕೆ ದೂರಾಗಿ ಕಲಿಯುಗದ
ಕಲುಷಿತ ಬದುಕಿಗೆ ಶರಣು ಶರಣೆಂದು
ಸಗ್ಗದ ಸೋಪಾನವೇರಿದ ತಾಯೇ ! ||ನ||

ಪತಿವರ್ಯನ ಪದಯುಗ್ಮಗಳನ್ನೆ
ನೆಮ್ಮಿ ಕಾಳಿ ನಾಮದ ಮಹಿಮೆಯನು
ಕಂಡುಕೊಂಡ ನಿಜ ದಯಿತೆ ಶಾರದೆ
ಕಲಿಯುಗದ ಮಹಾ ತಪಸ್ವಿನಿ ತಾಯೇ ! ||ನ||

ಲೋಕದ ಸತೀಮಣಿಯರಿಗೆ ನೀನೆ
ತಾಯಾಗಿ ಮೇಲ್ಪಂಕ್ತಿಯಾಗಿ ನಿನ್ನ
ಬಾಳನು ಮುಡಿಪಿಟ್ಟ ಭವತಾರಿಣಿ
ನಮಿಸುವೆ ತವಚರಣಕೆ ಭಕ್ತಿಯಿಂ
ಓ ಶಾರದಾದೇವೀ ! ||ನ||

— o —

# ಹೇ ಮಹಾ ಮಾತೆ....

ಹೇ ಮಹಾಮಾತೆ ಶಾರದಾ ದೇವಿ
ಪರಮಹಂಸರ ಮನಬೆಳಗಿದ ಸದಯೆ
ದೇವಯೂನಿ ಕವ ಪದಕಮಲಗಳಿಗೆ
ಶಿರವ ಬಾಗಿ ನಲವಿಂ ವಂದಿಸುವೆ ತಾಯೇ !

ದೇವಿ ಭಗವತಿ ಪರಮ ರಾಗಿಣಿ
ರಾಮಕೃಷ್ಣರ ಅರ್ಧಾಂಗಿ ತಪಸ್ವಿನಿ
ನಿನ್ನ ಭಕ್ತಿಪೂರ್ವಕ ಸಂನ್ಯಾಸ
ಸಾಮಾನ್ಯವಲ್ಲ ದೇವ ಮಾನಿನಿ ತಾಯೇ ! ||ಹೇ||

ಅಲೌಕಿಕ ಭಕ್ತಿ ಭಾವದಿ ಮುಳುಗಿ
ಲೌಕಿಕ ಸುಖದಾಸೆಯನು ಸಂಪೂರ್ಣ
ವರ್ಜಿಸಿ ದೇವಿ ಕಾಳಿಕೆಯ ಮಡಿಲೊಳ್
ಬಾಳನರ್ಪಿಸಿದ ತಾಯೆ ನಿನಗೆ ನಮಿಸುವೆ ||ಹೇ||

ಲೋಕದೊಳ್ ನಿನ್ನ ಸರಿಸಮಾನರು
ಆರಿಹರ್ ಪೇಳಿನ್ನ ಮಹಾಮಾತೆ
ನೀನೆ ಮಾರ್ಗದರ್ಶಿ ನೀನೆ ವರದಾಯಿ
ನಿನ್ನಡಿಗಳಿಗೆ ಭಕ್ತಿಯಲಿ ನಮಿಸುವೆ ತಾಯೇ ! ||ಹೇ||

— o —

## ಶ್ರೀರಾಮಕೃಷ್ಣ ಪರಮಹಂಸ ಸ್ತುತಿ

### ಮುಖ ವೀಣೆ....

ಮುಖ ವೀಣೆಯಲಿ ಮಾಧುರ್ಯ
ರಸ ಮಧುರ ದೌದಾರ್ಯ ಪಸರಿಸುತ
ಭಕ್ತ ದುಂಬಿಗಳನಾಕರ್ಷಿಸಿದ ವರ
ಸದಾಚಾರ ಸಂಪನ್ನ ಬ್ರಾಹ್ಮಣಾರ್ಯ
ಶ್ರೀ ರಾಮಕೃಷ್ಣ ಪರಮಹಂಸ ಪ್ರಭೋ
ನಿನಗೆ ಸವಿನಯ ವಂದನಂ. ||ಹೇ||

ಕಾಳಿಕಾಮಾತೆಯ ಪರಮಪಾದ
ನಿಷ್ಠೆಯಿಂ ನೈವೇದ್ಯವನುಣಿಸಿದ
ಮಹಾ ಮಹಿಮ ಪುಣ್ಯ ಪೂಜಾರಿ
ಸಾಕ್ಷಾತ್ ಶ್ರೀರಾಮನಭಿನ್ನ ಸ್ವರೂಪ
ಶ್ರೀ ರಾಮಕೃಷ್ಣ ಪರಮಹಂಸ ಪ್ರಭೋ
ನಿನಗೆ ಸವಿನಯ ವಂದನಂ. ||ಹೇ||

ಸಕಲಕಲಾ ಪಾರಂಗತ ಅಭಿನವ
ಶಾಂತ ಸ್ವರೂಪ ಭಕ್ತ್ಯಾವೇಶಿ
ಸತಿಯೊಳ್ ಶ್ರೀಕಾಳಿಯಂ ಕಂಡ ಸಾಸಿ
ಜನ್ಮ ಭೂಮಿಯನು ಪವಿತ್ರಗೊಳಿಸಿದ
ಶ್ರೀ ರಾಮಕೃಷ್ಣ ಪರಮಹಂಸ ಪ್ರಭೋ
ನಿನಗೆ ಸವಿನಯ ವಂದನಂ. ||ಹೇ||

ಶಮದಮಾದಿ ಷಡ್ ಸಾಧನದಿಂದ
ಮೃಣ್ಮಯೀ ಕಾಳಿಕೆಯಲಿ ಚಿನ್ಮಯೀ
ದೇವೀ ಮೂರ್ತಿಯನು ಕಂಡು ಕೊಂಡ
ಸಾತ್ವಿಕ ಗುಣಭಾವಗಳ ಧೀಮಂತ
ಶ್ರೀ ರಾಮಕೃಷ್ಣ ಪರಮಹಂಸ ಪ್ರಭೋ
ನಿನಗೆ ಸವಿನಯ ವಂದನಂ. ||ಹೇ||

— ೦ —

ಕಿರಿಯ ಪೂಜಾರಿತನದಿಂದ ಹಿರಿಯು
ಪೂಜಾರಿತನವ ಸದಾ ನಿರ್ವಹಿಸಿ
ಭಾರತ ವಂದ್ಯನಾಗಿ ಶಾಸ್ತ್ರೋಕ್ತ
ಹಠಯೋಗ ಸಾಧಿಸಿದ ಘನಯೋಗಿ
ಶ್ರೀ ಪರಮಹಂಸ ವಿಭೋ ನಿನಗೆ ನಮನಂ !

ಅದ್ವೈತಬ್ರಹ್ಮ ಸತ್ ಸಾಧನಾ
ನಿಷ್ಠೆಯಿಂದ ನಿರ್ವಿಕಲ್ಪ ಸಮಾಧಿಯ
ಸೋಪಾನವೇರಿದ ಬ್ರಹ್ಮಜ್ಞಾನಿ
ಪರಮ ತೇಜೋರಾಶಿಯು ಸಂನ್ಯಾಸಿ
ಶ್ರೀ ಪರಮಹಂಸ ವಿಭೋ ನಿನಗೆ ನಮನಂ ! ||ಕಿ||

ಸಚ್ಚಿದಾನಂದ ಸ್ವರೂಪಿ ಅಧಿ
ಮಾನಸದಲಿ ಪ್ರಕೃಷ್ಟ ಪ್ರಜ್ಞೆಯಿಂ
ಪಡೆದು ನಿರ್ವಿಕಲ್ಪ ಸಮಾಧಿಯಲಿ
ಲೀನನಾದ ಅಮೋಘ ಧೀಮಂತ
ಶ್ರೀಪರಮಹಂಸ ವಿಭೋ ನಿನಗೆ ನಮನಂ ! ||ಕಿ||

ನಿತ್ಯ ಸತ್ಯಾನ್ವೇಶಿ ತತ್ವಾರ್ಥ
ಚಿಂತನಾನುಭವಿ ಭಕ್ತಜನ ಪರಿ
ಪಾವನಾ ಆತ್ಮ ಚೈತನ್ಯ ರಸ
ವಾಹಿನಿಯಲಿ ಮುಳುಗೆದ್ದ ಪ್ರಜ್ಞಾನಿ
ಶ್ರೀ ಪರಮಹಂಸ ವಿಭೋ ನಿನಗೆ ನಮನಂ ! ||ಕಿ||

— ೦ —

# ಶ್ರೀಗುರುಸ್ತುತಿ

## ವರಗುರು....

ವರಗುರು ರಾಘವೇಂದ್ರನೆ
ವಂದಿಸುವೆ ನಿತ್ಯ ಎನ್ನ
ಶಿರವ ಬಾಗಿ ನಿನ್ನಡಿಗೆ.

ವೇದಾಧ್ಯಯನದಿಂದ
ಘನ ಪಾಂಡಿತ್ಯ ಪಡೆದ
ಮಹಾಮಹಿಮ ಸದ್ಗುರುವೆ. ||ಶ್ರೀ||

ಹಗಲಿರುಳೆನ್ನದೆ ಶ್ರಮಿಸಿ
ಸೋತು ಬಳಲಿ ತವಿಸಿ
ಸತ್ ವಿಶ್ರಾಂತಿಗೆ ಸಂದವನೆ. ||ಶ್ರೀ||

ವೃಂದಾವನದಿ ನೆಲಸಿ
ಭಕ್ತರ ಪಾಲನೆ ಸಲುವಾಗಿ
ದಿವ್ಯ ಸಮಾಧಿಗೆ ಸಂದವನೆ ||ಶ್ರೀ||

ಭಕ್ತಜನ ಪಾವನ ಕೀರ್ತಿಧಾಮ
ಶಿಷ್ಯಗಣ ನಮಿತ ದಿವ್ಯನಾಮ
ಭವಭಯ ದೂರ ಗುರುವರನೆ. ||ಶ್ರೀ||

— o —

# ಭಕ್ತಿಯಿಂದ....

ಭಕ್ತಿಯಿಂದ ಬೇಡುವೆ ಬನ್ನಿರೈ
ಪರಮ ಪ್ರಶಾಂತ ದೇವ ಗುರುಗಳೆ

ಗುರು ಕರುಣೆಯಿಲ್ಲದಾವ ವಿದ್ಯೆ ಪೇಳ್ ?
ಗುರುವಿರಲು ಮುಂದೆ ಬ್ರಹ್ಮಜ್ಞಾನದ
ಕಿಡಿ ಸಿಡಿದು ಹಿಂದೆ ಅರಳ್ವುದೆನ್ನ ಚಿತ್ತವು. ||ಭ||

ಲೋಕ ಕಲ್ಯಾಣಕೆ ಎಡೆಗೊಡದೆಯೆ
ಶ್ರಮಿಸಿದ ಶ್ರೀಮದ್ಗುರುವೆ ನಿನ್ನ
ಅಡಿಗಳಾಣೆ ಕರುಣೆದೋರೆನಗೆ. ||ಭ||

ನಿನ್ನ ದಯಾಪೂರ್ಣ ಕಟಾಕ್ಷವಿರದೆ
ಅನೆಂತು ಬಾಳ್ವೆನೊ ಭವಧಿಯಲಿ
ಕರುಣಾನಿಧಿಯೆ ಮುನ್ನಡೆಸೆನ್ನನು. ||ಭ||
ಹಿಡಿಯುವೆ ನಿನ್ನಯ ಚರಣವ !

— ೦ —

## ಶ್ರೀಗುರು....

ಶ್ರೀ ಗುರು ದೇವನೇ ಒಲಿದು ಬಾ
ಎನ್ನಯ ಎದೆಯ ಮಂದಿರಕೆ.

ನಿನ್ನನೆನಿತು ಬೇಡಲಿಲ್ಲ ಶ್ರೀಗುರುವೇ
ಭಂಗ ಬನ್ನಗಳಲಿ ತೊಳಲುತಿರಲಾನು
ನೀ ಬಂದೆಯಾ ಗುರುವೆ ಸಂತವಿಸಲೆನ್ನ ? ||ಶ್ರೀ||

ಎನ್ನ ಸಂಕಟವನೊರೆದು ಬೇಡಿದೆನೊ
ಕೈಮುಗಿದು ಕಾಲ್ವಿಡಿದು ಶ್ರೀಗುರುವೇ
ನೀ ಬಂದೆಯಾ ಕರುಣ ಕಾತರ ಸ್ವರದಿಂದ ? ||ಶ್ರೀ||

ಎನ್ನಯ ದುಃಖ ಸಂಕಟವ ಕಣ್ಣಿಟ್ಟು
ನೋಡುತಿರಲೆಲ್ಲರ್ ಕಟುಮನದಿಂದ
ನೀ ಬಂದೆಯಾ ಭಂಗವ ಪರಿಹರಿಸೆ ? ||ಶ್ರೀ||

ಕರುಣೆ ದೋರ್ವರಿಲ್ಲ ಸಂತೈಸರಿಲ್ಲ.
ಆಕ್ಕರೆಯ ಸವಿನುಡಿ ಸೂಸುವರಿಲ್ಲ
ನೀ ಬಂದೆಯಾ ಪೆಣ್ಣ ಕಂಬನಿ ತೊಡೆಯೆ ? ||ಶ್ರೀ||

— ೦ —

## ಆಳವರಿಯದ....

ಆಳವರಿಯದ ತಲಕೆ ಮುಳುಗಿದೆ ಮುಳುಗಿದೆ
ಮೇಲೆದ್ದು ಬರಲರಿಯದೆ ಕೊರಗಿ ಕರಗುತಿಹೆ
ನೀ ಬಂದೆನ್ನನು ಸಂರಕ್ಷಿಸು ಶ್ರೀಗುರು ದೇವನೇ !

ಭೂತದಯಾಪರ ಶ್ರೀಗುರು ಪರಾತ್ಪರ
ನೀಂ ಸರ್ವತ್ರ ಜಪತಪಾದಿ ಜ್ಞಾನ ದುರಂಧರ
ನಿನ್ನದೆ ನಿನಗಿರಲೆಲ್ಲಿ ಸಮಯವೆನ್ನ ಕರೆಗೆ ?
ಪಗಲಿರುಳು ನಿನ್ನ ಧ್ಯಾನವೊಂದಲ್ಲದೇನನು
ಕಾಣೆ. ನೀನೆನ್ನ ಕಾಯಬೇಕೋ ಶ್ರೀಗುರುದೇವನೆ ||ಶ್ರೀ||

ಅಕ್ಕರದ ಸಕ್ಕರೆ ಸವಿಯನು ಅರಿಯದೆ ದಕ್ಕದ
ಜ್ಞಾನ ಬಲದಿಂದ ದುಕ್ಕವೆನ್ನ ಕೊರಳೊತ್ತಿದೆ
ಏಂಗೈಯುಲರಿಯದೆ ಪರಿತಪಿಸುವೆ ಮನಂಗೆಟ್ಟು.
ದಯೆದೋರಿ ಎನ್ನ ದೀನ ಮೊರೆಯನು ಲಾಲಿಸಿ
ನೀನೆ ಬಂದು ಸಲಹೆನ್ನ ಶ್ರೀಗುರು ದೇವನೇ ||ಶ್ರೀ||

— ೦ —

# ಶ್ರೀಕೃಷ್ಣಸ್ತುತಿ

## ದೇವಕೀ....

ದೇವಕೀ ಕಂದ ಗೋಪಾಲ ಏಳಯ್ಯ
ಮುಕುಂದ ಮುರಮರ್ದನ ಏಳಯ್ಯ
ಬೆಳ್ಳನೆ ಬೆಳಗಾಯಿತು ಮೂಡಣದಲಿ.

ವಶಿಷ್ಟ ಶನಕಾದಿ ಮುನಿ ಋಷಿಗಳು ಕಾದಿಹರು
ನಿನ್ನ ದಿವ್ಯ ದರುಷನಕೆಂದು ನೀ ತಳುವದಿರು
ಕೇಳಯ್ಯ ಪಕ್ಷಿಗಳುಲಿವ ಸುಪ್ರಭಾತವ
ಹಾಲು ಕರೆದಳು ನಂದಿನಿ ನಿನಗೆಂದು ಪ್ರಭುವೆ ||ದೇ||

ತ್ರಿಲೋಕದ ವಿರಾಟ್ ನಿಯಂತ್ರಣ ಕಾದಿಹುದು
ನಿನ್ನ ಕರಕುಶಲ ಕಲೆಯು ಅಮೋಘ ಗಾರುಡಿಗೆ
ದೇವತೆಗಳು ಬೇಡುತಿಹರು ಚಾಕ್ಷುಷೀ ದೀಕ್ಷೆಯ
ನೀಡಿ ಉದ್ಧರಿಸು ಮನುಕುಲವ ಮಮ ಪ್ರಭುವೇ ||ದೇ||

— ೦ —

# ಈರೇಳು....

ಈರೇಳು ಲೋಕದ ಕಿನ್ನರಿಯನು
ಬಾಜಿಸುತ ನಿನ್ನ ಸಹಸ್ರನಾಮಾವಳಿಯ
ನುತಿಸಿ ಮನಃತಂತ್ರಿಯನು ಮಿಡಿಸುವೆನು
ನಿನ್ನ ದಿವ್ಯ ಧ್ಯಾನದ ನೇಮದಲಿ.

ಎಲ್ಲಿರುವೆ ತಂದೆ ಒಲಿದು ಬಾರಯ್ಯ
ಎನ್ನೊಡಲ ಸಂಕಟವ ಅರಿತರಿತು
ಸುಮ್ಮನಿರುವರೆ ಅಯ್ಯ ಲಕ್ಷ್ಮೀಶನೇ
ನಿನ್ನ ಬೇಡುವುದಲ್ಲದೆ ಬೇರಿಲ್ಲ
ಗತಿಯೆನಗೆ ತಿಳಿದು ಬಾ ಶ್ರೀಶನೆ ! ||ಈ||

ದಿನದಿನ ಬೇಡಿಯುಂ ನೀಡುವವ
ನೀನಲ್ಲ. ಕೇಳಿದುದ ದೂರ ತಳ್ಳಿ
ಬೇಡದುದ ನೀಡುವೆಯೆನೆ ಎಂತಾನು
ಕರೆಯುಲಿ ನಿನ್ನ ದಯಾಘನನೆಂದು
ಬಾ ಶ್ರೀಪತಿಯೆ ಸಮಸ್ಯೆಯ ಬಗೆಹರಿಸೆ ||ಈ||

— o —

# ನಾನಿನ್ನಯು....

ನಾನಿನ್ನಯು ಪಾದ ಪದುಮಗಳನು
ಬಿಡಲು ಒಲ್ಲೆ ನೀನೆನ್ನ ಕೈಬಿಡಲು
ಸಲ್ಲ ಶ್ರೀ ದೇವಾದಿ ದೇವನೇ !

ನಿನ್ನ ನಾಮಾವಳಿಯ ಎಡೆವಿಡದೆ
ಹಾಡಿ ಪಾಡಿ ಪೊಗಳುತಿಹೆ ನಿನ್ನಯ
ದಿವ್ಯ ದರುಶನವ ಬಯಸಿ ಪ್ರಭುವೇ ! ||ನಾ||

ಎನ್ನೆದೆ ಗವಿಯಲಿ ನಿನ್ನಯ ದಿವ್ಯ
ಮೂರುತಿಯನಿಟ್ಟು ಪೂಜಿಸುವೆನಯ್ಯ
ಭಕ್ತಿಯ ನೇಮದಲಿ ಪರಮಾತ್ಮನೇ ! ||ನಾ||

ನಿನ್ನ ನಾಮಾಮೃತವೇ ವರ ತೀರ್ಥ
ನಿನ್ನ ನೆನೆವುದೆ ಜಪತಪಂಗಳು
ನಿನ್ನ ನಮಿಸುವುದೆ ಪುಣ್ಯಯಾತ್ರೆಯು ||ನಾ||

— o —

# ಅಶಾಶ್ವತೆ....

ಅಶಾಶ್ವತ ಶರೀರವ ನಾನೆಚ್ಚಿ
ವಿಷಯಾದಿ ಕ್ಷುಲ್ಲಕ ವಿಚಾರಗಳ
ದೊಂಬಿಯಲಿ ಸೆರೆಸಿಲ್ಕಿ ಮೈಮರೆತು
ಮೆರೆದು ಕಡುಮೂರ್ಖಳಾದೆ ಪ್ರಭುವೇ !

ಬ್ರಹ್ಮಾಂಡ ಸೃಷ್ಟಿ ಕರ್ತನಾದಾ
ನಿನ್ನನೇ ಆಲಕ್ಷಿಸಿದೆ ನೆಣಗೊಬ್ಬು
ಬಲಿತು ರೋಗ ರುಜಿನಗಳ ವಶಳಾದೆ
ಹೇ ಪುಂಡರೀಕ ವರದ ರಕ್ಷಿಸೆನ್ನ. ||ಅ||

ಪರಮಾತ್ಮ ನೀಗೈದುಪಕಾರವನು
ಮರೆತು ಪಾಪ ಪಂಕಿಲದಲಿ ಮುಳುಗಿ
ತೊಳಲಿ ಬಳಲಿ ಗೋಳಾಡಿ ತಾಳದೆ
ಬಾಳದೆ ನಿನ್ನ ಬೇಡುತಿಹೆ ರಕ್ಷಿಸೆನ್ನ. ||ಅ||

— o —

# ಘನ ಶ್ಯಾಮ....

ಘನ ಶ್ಯಾಮ ಸುಂದರ ಪರಮ ಶ್ರೀಕರ
ಬಾಲಗೋಪಾಲ ಪರಮಾನಂದ
ವಂದಿಸುವೆನಯ್ಯ ಶ್ರೀ ಮುಚುಕುಂದ.

ಎಳೆತನದಲಿ ಲೀಲಾ ವಿನೋದವ
ತೋರಲು ಅಸುರರನು ವಧಿಸಿ ಶಿಷ್ಟ
ಜನರ ಸಂರಕ್ಷಿಸಿದ ಯದುಕುಲಪತಿ. ||ಘನ||

ದೇವಕೀ ಕಂದ ವಸುದೇವ ನಂದನ
ಸುಲಲಿತ ಚರಿತ ಬಂದು ತೋರಯ್ಯ
ನಿನ್ನ ಮುದ್ದು ಮುಖಾರವಿಂದವನು. ||ಘನ||

— o —

## ಅಪಾರ....

ಅಪಾರ ಕವಿ ಕಾವ್ಯ ಸಮುದ್ರವ
ಜಗದೀಶ ನೀನಲ್ಲದೆ ಸೃಷ್ಟಿಸುವ
ಶಕ್ತಿದಾತನಿನ್ನಾರ್ ಈ ಧರಣಿಯಲಿ.

ದೇವಾಧಿದೇವ ನಿನ್ನನೆ ನಂಬಿ
ಕಾವ್ಯಸೇವೆ ಸಾಗೈಯ್ಯಲೆಂದು
ಆದೇಶವನ್ನೆದುರು ನೋಡುತಿಹೆ. ||ಅ||

ನೀ ನಡೆಸಿದಂತೆ ನಾನು ನಡೆಯುವೆ
ನಿನ್ನ ಆದೇಶವೆ ಜಗದ ನಿಯಮ
ನಿನ್ನ ನಿರೂಪಣೆಯೆ ರಸಕಾವ್ಯ. ||ಅ||

ನೀನೇ ಸೃಷ್ಟಿದಾತ ನೀನೆ ವೀರ್ಯ
ಶೌರ್ಯಗಳ ಪ್ರಾಧಿಕಾರಿ ಸಾರ್ವ
ವಿದ್ಯೆ ಬುದ್ಧಿಗಳ ವೀರರಸಕಾರಿ
ರಕ್ಷಿಸೆನ್ನ ನನವರತ. ||ಅ||

— ೦ —

## ಎನ್ನೀ....

ಎನ್ನೀ ಎದೆಯಂಗಣದ ಯಮುನಾ
ತೀರದಲಿ ವೇಣುಗಾನವ ಗೈಯ್ಯುವ
ಶ್ರೀ ಕೃಷ್ಣನಿಹನು ರಾಧೆಯೊಡಗೂಡಿ.

ತೀರದ ಬಯಲಲಿ ಗೋಪಬಾಲಕ
ಬಾಲಕಿಯರು ಕೂಡಿ ರಾಸ ಕ್ರೀಡೆಯ
ಮೋದದಲಿ ಮೈಮರೆತಿಹರು ನೋಡೆ. ||ಎನ್ನೀ||

ಚಿಣ್ಣ ಚಿಣ್ಣ ಹಾಲ್ಗರುಗಳು ಕುಣಿದು
ಕುಪ್ಪಳಿಸಿ ಚಕ್ಕಂದವಾಡುತಿಹವು
ನಲವಿಂದ ಅಂಬೆ ಅಂಬೆಯೆನುತಲಿ. ||ಎನ್ನೀ||

ಎಲ್ಲರೂ ಬನ್ನಿರೊ ಹೃದಯದ
ಉದ್ಯಾನ ರಂಗಕೆ. ಕೊಳಲನೂದಿ
ರಾಗಮಾಲೆಯ ಹಬ್ಬಿಸಲು ಬನ್ನಿ. ||ಎನ್ನೀ||

ಲೋಕದ ನಿಜ ಬಾನಲಕೆ ಶಾಂತಿಯ
ನೀಡಲು ಬನ್ನಿ. ಒಡಲ ಕ್ಷುದ್ ಬಾಧೆಗೆ
ಕ್ಷೀರ ವಾರಿಧಿಯ ಹರಿಸಲು ಬನ್ನಿ. ||ಎನ್ನೀ||

— o —

# ಯಾದವ....

ಯಾದವ ಕುಲತಿಲಕ ಜಗಜ್ಜನಕ
ಸಕಲ ಮುನಿ ಕುಲಪಾಲ ವನಮಾಲ
ನಂದಗೋಪ ಕುಮಾರ ಗೋಪಾಲ

ದೀನಜನ ಸಂರಕ್ಷಕ ಭವರೋಗ
ವೈದ್ಯ ಅಖಿಲಾಂಡದ ದಿವ್ಯ ಧನ್ವಂತ್ರಿ
ಮಂದರೋದ್ಧರ ದೇವಕೀ ನಂದನ ||ಯಾ||

ಅನುಪಮ ಲೀಲಾ ವಿನೋದ ವೀರ
ವಿಜಯ ಸಖ ವೇಣುಗಾನ ವಿಲೋಲ
ವಂದಿಸುವೆ ಭಕ್ತಿಯಿಂದ ತವಚರಣಕೆ ||ಯಾ||

— ೦ —

# ಸ್ಮರಣೆಯ....

ಸ್ಮರಣೆಯ ಮಾಡಿರೋ ನೀವೆಲ್ಲರು ಬಿಡದೆ
ಶ್ರೀ ಪದುಮನಾಭನ ಸ್ಮರಣೆಯ ಮಾಡಿರೊ

ಲೋಕ ವಂದ್ಯನಾಗಿ ಶ್ರೀ ವೈಭವದಲಿ
ಯಶೋದೆಯ ಸುತನಾಗಿ ನಲಿದಾಡುವ
ಪದುಮನಾಭನ ಸ್ಮರಣೆಯ ಮಾಡಿರೊ ||ಸ್ಮ||

ಬಲಿ ವಿಕ್ರಮ ವೀರನ ತತ್ತಳ ತುಳಿದ
ತ್ರಿವಿಕ್ರಮನ ಭಕ್ತಿಯ ಸ್ಮರಣೆಯಿಂದ
ಭವರೋಗ ಹರಿಸಿ ಶಾಂತಿಯ ಪಡೆಯಿರೊ ||ಸ್ಮ||

ವೇದ ವೇದಾಂಗಗಳ ದೇವಿಗೆ ಪ್ರಸೀದನಾದ
ಶ್ರೀ ಮಧುಸೂದನನ ನೆನೆದು ದುರಿತಗಳ
ತೊಡೆದು ಸಂಜೀವನ ಶಾಂಶಿಯ ಪಡೆಯಿರೊ ||ಸ್ಮ||

— o —

# ಸ್ಮರಿಸು ಮನವೆ....

ಸ್ಮರಿಸು ಮನವೆ ಸರ್ವತ್ರ ಸದಾ
ಬಾಲಗೋಪಾಲನ ಸ್ಮರಿಸು ಮನವೆ
ದೀನ ದರಿದ್ರರ ದಿವ್ಯ ಪ್ರಭುವನು.

ಜಪಹೋಮ ವ್ರತಾದಿ ನಿಯಮಗಳ
ಮರೆ ಹೋಗದೆ ನಿಚ್ಚ ಸ್ಮರಿಸು ಮನವೇ
ಅಣುರೇಣು ತೃಣಕಾಷ್ಠದಲಿ ಚರಿಪ
ಅನಂತ ಮೂರುತಿಯ ಸ್ಮರಿಸು ಮನವೇ. ||ಸ್ಮ||

ಸ್ಮರಣೆಯೊಂದೆ ಭವಜನಿತ ದುಃಖವ
ಕಳೆವುದು ಪರಮ ಜ್ಞಾನದ ಬೆಳೆಯ ಬಿತ್ತಿ
ಲೋಕದ ಲೋಗರ ಕುಲಾಚರಣೆಯ
ನಂಬಿ ಅಂಜದೆ ನೀ ಸ್ಮರಿಸು ಮನವೇ. ||ಸ್ಮ||

— ೦ —

## ಶ್ರೀಕೃಷ್ಣಾ....

ಶ್ರೀ ಕೃಷ್ಣಾ ಎನ್ನಯ ಮುದ್ದು ಕಂದಾ
ಕಲಿಯುಗವಿದೆಂಬುದು ಸಲಸಲಕೂ
ಮರೆತು ಸದಾ ಬೇಡುವೆನು ನಿನ್ನನು
ಕೈಮುಗಿದು ಕಾಡುವೆ ಬಾ ಬಾರೆಂದು.

ನಿನ್ನ ಸವಿಮೊಗವನಿಂದೆ ಕಂಡಂತೆ
ಪರಿಭಾವಿಸುವೆ ಕವಿ ಕಲ್ಪನೆಯುಲಿ
ನಿನ್ನ ಮುದ್ದು ಮೊಗದ ಸಲ್ಲಕ್ಷಣವು
ನಲಿಯುವುದು ಅಕ್ಷಿ ಪಟಲದ ಮೇಲೆ. ||ಶ್ರೀ||

ಎಸಳು ಮೂಗು ಚೆಂದುಟಿ ಚೆಲುವು ಅರಳು
ಕಂಗಳ ಹೊಳಪು ಕಿರೀಟ ಕುಂಡಲ
ಕಾಲಂದಿಗೆಗಳ ಜಣಿ ಜಣಿ ಸದ್ದು
ಕೊಳಲಿನ ನಾದಸ್ವರವನೇನೆಂಬೆ? ||ಶ್ರೀ||

ಎಲ್ಲವಂ ಇದೀಗಲೆ ಕಂಡಂತೆ
ಮನೋಭಿತ್ತಿಯುಲಿ ನಿಂತಿರೆ ಮೂಡಿ
ವಿನಮ್ರತೆಯಿಂ ಕರಗಳ ಜೋಡಿಸಿ
ಬೇಡುವೆ ಬಾಬಾರೆಂದು ಕಂದ ಶ್ರೀಕೃಷ್ಣಾ! ||ಶ್ರೀ||

— o —

# ನಿನ್ನ ನಂಬಿದೆನೊ....

ನಿನ್ನ ನಂಬಿದೆನೊ ಪರಮಾನಂದ ಗೋವಿಂದ
ಪರಮ ಕರುಣೆಯಿಂದಲಿ ಬಂದೆನ್ನ ರಕ್ಷಿಸಯ್ಯ
ಕೈಮುಗಿದು ತಲೆಮಣಿದು ಬೇಡುತಿಹೆ ಮನನೊಂದು.

ಸಂಸಾರವೆನ್ನ ಕೊರಳಿಗೆ ಸಂದು ದಿನನಿತ್ಯ
ಘೋರ ಜಂಜಡದಲಿ ಸಿಲ್ಕಿ ನೊಂದು ನೋಯುತಿಹೆ
ಬಿಡುತೆ ಗಾಣದೆ ಮಂದಮತಿಯಲಿ ಬೇಡುವೆ ನಿನ್ನ ||ನಿ||

ನಂದಗೋಪನ ಕಂದ ಶ್ರೀ ಮುಕುಂದ ಯಶೋದೆ
ಪ್ರಿಯ ಕಂದ ನೀನೇ ಇಂದೆನಗೆ ನಿಜಬಂಧು
ನೀನಲ್ಲದಾರಿಹರು ಬಂದು ಕಾಯಲೆನ್ನನು. ||ನಿ||

— ೦ —

# ಮಾನವ....

ಮಾನವ ಕುಲಪತಿ ಶ್ರೀ ಗೋವಿಂದ
ನಿನ್ನ ನಾಮಧೇಯವೆ ಸದಾನಂದ

ವಸುದೇವ ಕಂದ ಬಾರಯ್ಯ ಮನೆಗೆ
ಕೈಮುಗಿದು ಬೇಡುವೆನು ನೀನು ಆಲಿಸಿ
ಗೆಜ್ಜೆ ಕಾಲಂದಿಗೆ ಘಲಿರೆನಿಸುತ
ಮುಗುಳು ನಗೆಯು ಚೆಂಬೆಳಕು ಬೀರುತ ಬಾ. ||ಮಾ||

ನಿನ್ನ ಮುದ್ದು ಮುಖವನು ನೆನೆ ನೆನೆದು
ಸಕಲ ಮನಃಕ್ಲೇಶ ಬಾಧೆಗಳ ಕಳೆದು
ನಿನ್ನಾಗಮನದ ಸವಿಯು ಮೊಗೆದುಂಡು
ನಲಿವೆ ಯಶೋದೆಯು ಕಂದ ಬಂದನೆಂದು. ||ಮಾ||

ಮಂದರ ಗಿರಿಯಲಿ ಯಮುನೆಯ ತಡಿಯಲಿ
ರಾಸ ಕ್ರೀಡೆಯನಾಡಿದ ಗೋವಿಂದ
ಚಂದದಿಂದ ಬಾರೋ ಮನೆಗೆ ಆನಂದ
ಲೋಕವೆಲ್ಲ ಪೊಗಳುತಿಹುದು ಕಂದ ||ಮಾ||

— ೦ —

# ಮರೆದೆನು....

ಮೆರೆದೆನಭ್ಯುದಯದಲೆಂದು ಮರೆಯೆ
ನಿನ್ನನಾಪತ್ತಿನಲಿ ಶ್ರೀ ಹರಿಯೆ

ಏಕ ಭಾವದೊಳು ನಿಮ್ಮ ಪಾದಗಳ
ಪೂಜಿಸಿ ಭಜಿಸಿ ತೊಳೆವೆನೆನ್ನಯಾ
ಸಂಕಟವ ಹೇ ದಿವ್ಯಾತ್ಮ ಹರಿಯೆ ||ಮೆ||

ದೀನಾತಿದೀನೆ ನಾನು ತ್ರಿಲೋಕ
ಜ್ಞಾನಿ ನೀನು ನಿನ್ನ ಸಮಾನರನು
ಕಾಣೆ ಜಗದಿ ಪರಮಾತ್ಮ ಹರಿಯೆ ||ಮೆ||

ಕುಚೇಲ ವರದ ನಾರದ ಲೋಲ
ಕೋಟಿ ಸೂರ್ಯ ತೇಜ ನೀನಲ್ಲದೆಯೆ
ರಕ್ಷಿಸುವವರಾರು ಜಗದಾತ್ಮ ಹರಿಯೆ ||ಮೆ||

— ೦ —

# ಎಲ್ಲಿ....

ಎಲ್ಲಿ ನೋಡಿದರಲ್ಲಿ ನಿನ್ನ ಶ್ರೀಮೂರುತಿ
ಕರ್ಣ ಕುಂಡಲ ಕಿರೀಟಗಳ ವರಕೀರುತಿ
ಓಡಿ ಬಾರಯ್ಯ ಚೆಂದದಿಂದ ಶ್ರೀಗೋವಿಂದ.

ನಿನ್ನ ಪಾದ ಕಮಲಗಳ ಮುಟ್ಟಿ ಭಜಿಸುವೆ
ಮುದ್ದು ಮುಖವನು ತೋರೋ ಜವದಿ ಗೋವಿಂದ
ಗೆಜ್ಜೆ ಕಾಲ್ಗಳಿಂದ ಧಿಮಿಧಿಮಿ ಕುಣಿಯುತಲಿ
ನೀ ಬಾರಯ್ಯ ಕೋಮಲ ಕಾಯ ಶ್ರೀಗೋವಿಂದ. ||ಎಲ್ಲಿ||

ನಿನ್ನ ಕೃಪೆಗೆ ಪಾರವಿಲ್ಲ ಎಂಬುವರಯ್ಯ
ಕೇಳೆನ್ನ ದೀನಾರ್ತಮೊರೆಯು ಸಿರಿದೊರೆಯೆ
ನಿನ್ನ ಪರಮ ಸೇವೆಯ ಬಯಕೆಯಲ್ಲದೆಯೆ
ಬೇರೇನ ಬೇಡೆನು ಕರುಣಿಸು ಶ್ರೀಗೋವಿಂದ. ||ಎಲ್ಲಿ||

— ೦ —

## ತ್ರಿಲೋಕ....

ತ್ರಿಲೋಕ ಮಾನ್ಯನು ನೀನು ಮತಿಗತಿ
ತಪ್ಪಿದ ಹೀನಾತಿಹೀನೆಯು ನಾನು
ಈ ಲೋಕದೊಳ್ ನೀನಲ್ಲದಾರುಗತಿ
ಪಾಹಿಮಾಂ ಪರಿಪಾಹಿಮಾಂ.

ಸತ್ಯವೇದದ ಆಳವನಾನರಿಯೆ
ಆತ್ಮವೇಢದೆತ್ತರವ ನಾನರಿಯೆ
ನಿನ್ನ ಪ್ರಕೃತಿತೇಜವ ನಾನರಿಯೆ
ಪಾಹಿಮಾಂ ಪರಿಪಾಹಿಮಾಂ. ||ತ್ರಿ||

ಧರ್ಮಕರ್ಮದ ಸಾರವ ನಾನರಿಯೆ
ಇಹಪರಗಳ ಜ್ಞಾನವನು ನಾನರಿಯೆ
ನಿನ್ನ ಬಿರುದು ಬಾವಲಿಗಳ ನಾನರಿಯೆ
ಪಾಹಿಮಾಂ ಪರಿಪಾಹಿಮಾಂ. ||ತ್ರಿ||

— o —

## ಬಾಳಿನ....

ಬಾಳಿನ ಅಪಮೌಲ್ಯವೆನ್ನ ಕಡೆಗಣಿಸಿ
ತಳ್ಳುತಿರೆ ಆಳಕೆ ನಿಷ್ಕರುಣೆಯಿಂದೆ
ನಿನ್ನನಲ್ಲದಾರ ಬೇಡಲಿ ಪ್ರಭುವೇ.

ಯಾದವಕುಲ ತಿಲಕ ಪರಮಾನಂದ
ಗೋವಿಂದ ಶ್ರೀಮುಕುಂದ ಮುರಾರೆ
ಆಲಿಸೆನ್ನ ಮೊರೆಯ ನೀ ಮನಗೊಟ್ಟು
ಗತಿಹೀನರಿಗಾರು ನೀನೇ ಗತಿಕಣ
ಕನಿಕರಿಸಿ ಕೊಡು ಸದ್ಗತಿಯ ಹರಿಯೆ. ||ಬಾ||

ಧಾರುಣಿಗೆ ವರ ಚಕ್ರವರ್ತಿಯೆನಿಸಿ
ಮರೆವರೆ ನಿಮ್ಮಾಧೀನ ಪ್ರಜೆಗಳನು
ನೀಗೈದುಪಕಾರವನು ಮರೆಯೆನು.
ಪರಮ ಕರುಣಾಸಿಂಧು ಬಂದೆನ್ನ
ಬಿಡಿಸಯ್ಯ ಬಂಧನದಿಂದಲಿ ಪ್ರಭುವೇ. ||ಬಾ||

— ೦ —

## ಭಜಿಸು....

ಭಜಿಸು ಭಜಿಸು ಮನವೆ ಅನುಗಾಲವು
ಭಜಿಸು ಶ್ರೀಕೃಷ್ಣ ನಾಮಾವಳಿಯ
ಭಜಿಸು ಮನವೆ ಭಜಿಸು.

ದುರಿತ ಕೋಟಿಯ ಅರೆದು ದೀನರನು
ಉದ್ಧರಿಸುವ ಪರಿಪುಣ್ಯ ಪುರುಷನ
ಮರೆಯದೆ ಸ್ಮರಿಸಿದೊಡಿರದು ನರಕ
ಭಜಿಸು ಮನವೆ ಭಜಿಸು. ||ಭ||

ತ್ರಿಲೋಕ ಪೂಜಿತ ಮುನಿಗಣ ವಂದಿತ
ದೇವಕೀನಂದ ಶ್ರೀಗೋವಿಂದ
ಗೋಪಾಲ ಕೃಷ್ಣನ ಶುಭಚರಿತವ
ಭಜಿಸು ಮನವೆ ಭಜಿಸು. ||ಭ||

ದೀನರಕ್ಷಕ ದಾನವಾಂತಕ ಕರುಣಾ
ಸಾಗರನ ಪದಾಬ್ಜಗಳ ಸೇವೆಯಲಿ
ಪಾಪವನು ಪರಿಹರಿಸಿ ಸುಖಿಯಾಗೆ
ಭಜಿಸು ಮನವೆ ಭಜಿಸು. ||ಭ||

— ० —

# ಲೋಕದೊಳ್....

ಲೋಕದೊಳ್ ದೀನೆಯಾಗಿ ಗತಿತಪ್ಪಿ
ಬೇಡುತಿಹೆ ಮುಂಗಾಣದೆ ಕಂಗೆಟ್ಟು
ಪಾಹಿಮಾಂ ಪರಿಪಾಹಿಮಾಂ.

ಲೇಸಿನಿತು ಕಾಣೆನೀ ಭವಧಿಯಲಿ
ನಿನ್ನ ಪದಾಬ್ಜವ ಧ್ಯಾನಿಸುತ
ಸೇವೆಸಲಿಪ ಪರಿಯನರಿಯದಾದೆ
ಪಾಹಿಮಾಂ ಪರಿಪಾಹಿಮಾಂ. ||ಲೋ||

ಹಲಹಲವು ಕುಕರ್ಮಗಳ ಹೊಲಸಿನ
ಹೇಸು ಜೀವನ ಸಾಕೆನಗೆ ನಿನ್ನ
ಭಕುತಿ ಈಯುಲೆನಗೆ ಮಿಗೆ ಮುಕುತಿಯು
ಪಾಹಿಮಾಂ ಪರಿಪಾಹಿಮಾಂ. ||ಲೋ||

— ೦ —

## ಲೋಕ ಭಾರ....

ಲೋಕ ಭಾರ ಕರ್ತನು ನೀನಿರಲು
ಎನ್ನೊಂದು ಕಿರು ಭಾರವ ಹೊರಲಾರದಿರೆ
ಪರಿಹಾಸವಲ್ಲವೇ ನಿನಗೆ ಸ್ವಾಮಿಾ ?

ನಿತ್ಯಗೋಳಿನ ಕಣಜದಿಂದೆನ್ನ
ಬಿಡುತೆಗೈಯೆಂದು ಬೇಡುವೆ ನಿನ್ನ
ಕಂಡುಕಂಡು ದಯೆದೋರದಿರಲೆಂತೊ
ದೀನ ಬಂಧುಸೆಂಬ ಬಿರುದು ಪೊತ್ತು ? ||ಲೋ||

ನೀನೆನ್ನ ತಾಯಿತಂದೆ ನೀನೆನ್ನ
ಬಂಧು ಬಳಗ ನೀನೆನ್ನ ಸತ್ಯಧರ್ಮ
ನೀನೆನ್ನ ಉದ್ಧರಿಪ ದೇವರ ದೇವ
ನೀನಿಲ್ಲದೆಂತೆನ್ನ ಬಾಳ ಬೆಳಕು ? ||ಲೋ||

— o —

# ಶ್ರೀ ವಿಭುವೆ....

ಶ್ರೀ ವಿಭುವೆ, ನಾನಿನ್ನ ಅಷ್ಟೈಶ್ವರ್ಯ
ಸಂಪದಗಳನು ಬೇಡಿಕೊಳ್ಳಲಿಲ್ಲ.
ರಾಜಭೋಗವನು ಕೋರಿದೆನಿಲ್ಲ
ನಿನ್ನ ಸೇವೆಯೇ ನಿಚ್ಚವಾಗಲೆನಗೆ. ||ಶ್ರೀ||

ಪ್ರಭುವೇ ನಾ ಬಯಸಿದುದು ನಿನ್ನ
ಪರಮ ಸೇವೆಯನು ನೀ ನೀಡಿದುದು
ಕಟು ಕಠಿಣ ಕುಸಂಸ್ಕಾರ ಬಂಧನವ.
ಏಂವೇಳಲಿ ಎನ್ನಯ ಪ್ರಭುವೇ
ನೀನೇ ಪರಾಮರಿಸೆನ್ನ ಗತಿಯ. ||ಶ್ರೀ||

ನಿಷ್ಕಾಮ ಕರ್ಮದಲಿ ಮುಳುಗಿ ತವ
ಸೇವೆಯನು ಮಾಡುತಿರೆ ನೀ ಬಂದೆಯಾ ?
ನಾನೆನಿತು ಧ್ಯಾನಿಸಿದೊಡೇನು ನೀನು
ತೋರಿದೆಯಾ ಕರುಣೆಯಲಿ ಮುಖಪದ್ಮವ ?
ಕಾಲ್ಪಿಡಿದು ಬೇಡುವೆನು ಶ್ರೀಪತಿಯೇ. ||ಶ್ರೀ||

— ೦ —

# ವಿರಾಟ್ ವಿಶ್ವ

ವಿರಾಟ್ ವಿಶ್ವ ಚಕ್ರವರ್ತಿಯಾದ
ನಿನ್ನನೆ ಮರೆತು ಅಪಚಾರವೆಸಗುವರೆ
ಪೇಳಿನ್ನ ಪ್ರಾಣವಲ್ಲಭ ಹರಿಯೇ.

ಬೇಡ ಕುಲದಲಿ ಜನಿಸಿ ಅನ್ಯರನು
ಕೊಂದು ನೀತಿಗೆಟ್ಟವನು ನಿನ್ನಯ
ನಾಮದೊಳಧಿಕವೆರಡಕ್ಷರವ ತಾನು
ಬಣ್ಣಿಸುತ ಸರ್ವ ಸಂಪನ್ನತೆಯ
ಪಡೆದು ಧನ್ಯನಾದನು ಮುನಿಕುಲದಿ. ||ಶ್ರೀ||

ನೀನೊಲಿದ ಮೇಲಿನ್ನು ಪಾತಕವು
ಉಳಿವುದುಂಟೆ ? ನೀನಿರೆ ಬೆಂಗಾಯ್ದು
ಲೋಕ ಜೀವನವು ತೊಳಗಿ ಬೆಳಗದೆ
ದಯಾಘನ ಮೂರುತಿಯೆ ಮರೆಯದಿರು
ನಿನ್ನ ಕೈಮುಗಿದು ಬೇಡುವೆ ಹರಿಯೆ. ||ಶ್ರೀ||

— o —

# ಗೋವಿಂದ....

ಗೋವಿಂದ ಬಂದಾನೇ ಸಚ್ಚಿದಾನಂದ ಮೂರ್ತಿ
ಯಶೋದೆಯ ಕಂದ ಬಂದಾನೇ ಯಮುನೆಯ ತಟಿಗೆ.

ನದಿಯ ತೀರದಲಿ ಗೋವಳರ ಕೂಡಿ ಗೋಪಾಲ
ಕೊಳಲನೂದುತ ನಲಿಯುತಿಹನೋಡೆ ಚಂದ್ರಮುಖಿ. ||ಗೋ||

ನದಿ ತಟಿಯಲಿ ಗೋವುಗಳು ಕೊಳಲಿನ ನಾದವನು
ಆಲಿಪುದ ನೋಡಿ ನಾವು ನಲಿಯುವ ಬಾರೆ ಸಖಿ. ||ಗೋ||

ಹಾಲ್ಗರುಗಳು ಅಂಬೆ ಅಂಬೆ ಎನುತ ಕುಣಿಯುವುದ
ನೋಡಿ ಆನಂದಿಸುವ ಬಾಬಾರೆ ನಳಿನಮುಖಿ. ||ಗೋ||

ಹಾಲುಹಣ್ಣುಗಳ ನೊಯ್ದು ಕೊಡುತೆ ನಾವು ಕೂಡಿ
ಹಾಡಿ ಪಾಡಿ ಆನಂದಿಸುವ ಬಾಬಾರೆ ಪ್ರಿಯ ಸಖಿ. ||ಗೋ||

ಮೊಸರು ಬೆಣ್ಣೆಗಳ ನೊಯ್ದು ಬೆಣ್ಣೆಬೇಕೆ ಬೆಣ್ಣೆ ಎಂದು
ಬೆಣ್ಣೆಯ ನೀಡಿ ಹರಿಗೆ ಮಂಗಳವ ಹಾಡುವ ಬಾರೆಸಖಿ. ||ಗೋ||

— o —

## ಮನವೆಂಬ....

ಮನವೆಂಬ ಮರ್ಕಟವು ಇದ್ದೆಡೆ ಇರಲೀಯದೆ
ಕಾಡುತಲಿಹುದೆನ್ನನು ಹೇಸುಗತಿಯಲಿ ತಳ್ಳಿ.
ನಿನ್ನ ಧ್ಯಾನಿಸಲರಿಯೆ ಸ್ಮರಿಸಿ ವಂದಿಸಲರಿಯೆ
ದಿವ್ಯ ಮುಕ್ತಿ ಪಥವ ಹಿಡಿಯಲರಿಯೆ ಶ್ರೀ ಹರಿಯೆ.

ದಿನನಿತ್ಯ ವಿಷಯ ಕೇಳಿಯಲಿ ಮುಳುಗಿಸುತೆನ್ನ
ನಿನ್ನ ಮಂಗಳ ವದನಾರವಿಂದಕೆ ತೆರೆಯಿಕ್ಕಿ,
ನೀನೆಲ್ಲವ ಮರೆ ಮಾಚಿರೆ ನೆನೆಯದಾದೆ ನಿನ್ನ
ವ್ಯರ್ಥ ಕಳೆದು ಹೋದುದೆನ್ನ ಕಾಲ ಶ್ರೀಹರಿಯೆ. ||ಮ||

ದುರ್ವ್ಯಾನ ದುರಾಸೆಗಳು ಕಾಡುತಿವೆ ಎನ್ನನು
ಮುಂಗಾಣದೊಲ್ ಮತಿಗೆಡಿಸಿ ಗತಿಗೆಡಿಸಿ ನಿಚ್ಚ.
ನಿನ್ನ ಧ್ಯಾನಿಸದ ಪರಿಯಲಿ ಕೊರಗೊತ್ತುತಿಹುದೆನ್ನ
ನೀನೆ ಮುಕ್ತಿ ಪಥವ ತೋರಿ ಸಲಹೆನ್ನ ಶ್ರೀಹರಿಯೆ. ||ಮ||

— ೦ —

# ವಿಠ್ಠಲ ವಿಠ್ಠಲ....

ವಿಠ್ಠಲ ವಿಠ್ಠಲ ವಿಠ್ಠಲ ಜೈಜೈ ವಿಠ್ಠಲ
ಜೈಜೈ ಪಾಂಡುರಂಗ ಜೈಜೈ ವಿಠ್ಠಲ.

ಜಯ ಹರಿ ವಿಠ್ಠಲ ಪಾಂಡುರಂಗ
ಜಯ ಕೃಷ್ಣ ವಿಠ್ಠಲ ಪಾಂಡುರಂಗ
ಜಯ ಜಯ ವಿಠ್ಠಲ ಪಾಂಡುರಂಗ. ||ವಿ||

ಇಂದಿರಾ ರಮಣ ಪರಮಾನಂದ
ಬಾರಯ್ಯ ಮನೆಗೆ ಹರಿ ಗೋವಿಂದ.
ನಿನ್ನ ಪಾದವ ತೊಳೆದು ಜಲಪಾನ
ಗೈವೆನೊ ಜಗದಾನಂದ ಮೋಹನ. ||ವಿ||

ದೀನ ಜನ ಮಂದಾರ ಸುಗುಣ ಭರಿತ
ವದನಾರವಿಂದವ ತೋರೋ ಭಗವಂತ
ಭಕ್ತ ಜನರ ಕೈಬಿಡದ ಮಹಂತ
ಪ್ರಜ್ಞಾನ ಪರಂಜ್ಯೋತಿ ಭಗವಂತ. ||ವಿ||

— ೦ —

## ಶ್ರೀ ಪರಮ....

ಶ್ರೀ ಪರಮ ಪುಂಡರೀಕಾಕ್ಷ ಪುರುಷೋತ್ತಮ
ನಿನ್ನ ಧ್ಯಾನಿಸಲೆನ್ನ ಮನಕಿಲ್ಲ ಶಾಂತಿಧಾಮ
ಎಡೆವಿಡದೆ ಪರಿತಪಿಸುತ ಕಂಬನಿ ಕೋಡಿಯಲಿ
ಮಿಂದು ನಿನ್ನ ಪಾದಗಳ ತೊಳೆವೆನೊ ಹನಿಸೂಸಿ.

ದೀಪ ಉರಿಸುವೆನೆನೆ ಬತ್ತಿಯಿಲ್ಲ ತೈಲವಿಲ್ಲ
ಹರಿಯೆ, ಆನೇಂ ದೀಪ ಉರಿಸಬಲ್ಲೆ ನಿನ್ನ ಗುಡಿಯಲಿ?
ನೀನೆನ್ನ ಎದೆಗುಡಿಗೆ ಜ್ಞಾನದ ಬೆಳಕನಿತ್ತು
ಸಲಹಬೇಕಯ್ಯ ಕರುಣಾಸಿಂಧು ಅನವರತ. ||ಶ್ರೀ||

ನಿತ್ಯ ಪರಮ ಭಕ್ತರ ಕೋಟಿ ಸುತ್ತುವರಿದಿದೆ ನಿನ್ನ
ಎನ್ನಂಥ ದೀನರಿಗೆಲ್ಲಿಯ ದರುಶನವಿನ್ನು?
ಹನುಮನಂತೆ ಸೇವಿಸಲರಿಯೆ ಭರತನಂತೆ
ಭಕ್ತಿಯನು ತೋರಲರಿಯೆ ನಮಿಪೆನು ಅನವರತ. ||ಶ್ರೀ||

— ೦ —

# ವಿಧಿಲಿಖಿತವನು....

ವಿಧಿ ಲಿಖಿತವನು ನೀನಲ್ಲದೆ ಅಳಿಸುವರಿಲ್ಲ
ಮೂಢಮತಿಯಿಂದ ಜಡನೆ ಎಲ್ಲ. ನಿನ್ನ ಮರೆತು
ದಿನದಿನ ಗಂಡಗರ್ವದೊಳ್ ಮೆರೆದೆನೊ ಶ್ರೀಹರಿಯೆ.

ಲೋಕವೆಲ್ಲ ನೋಡಿ ನಗುತಿದೆಯೆನ್ನ, ತಾಳದೆ
ಬಾಳದೆ ಬದುಕಿಗೆ ಹೊರೆಯಾದೆ. ನರಕ ಭೋಗದ
ಮಹಾಯಾತನೆಯುಲಿ ನರಳುತಿಹೆನೋ ಶ್ರೀಹರಿಯೆ. ||ವಿ||

ಸಕಲೈಶ್ವರ್ಯಗಳೆನಗೆ ಬೇಡ. ಸುಖಭೋಗವೆನಗೆ
ಬೇಡ. ನಿನ್ನ ಪಾದಾರವಿಂದವ ತೊಳೆವುದೆನಗೆ
ಲೇಸಯ್ಯ. ಅಷ್ಟವರವಿತ್ತು ಪಾಲಿಸೆನ್ನನು ಶ್ರೀ ಹರಿಯೆ ||ವಿ||

ಮೃಷ್ಟಾನ್ನ ಭೋಜನವೆನಗೆ ಬೇಡ ನೀನೀವ
ನಿನ್ನ ಅರಮನೆಯು ಕಸ ಬಳಿವುದೆ ನಿಚ್ಚಪಾಗಲೆನಗೆ
ಬದುಕು ಕೊನೆ ಮುಟ್ಟುವನಕ ಕೇಳ್ ಶ್ರೀ ಹರಿಯೆ ||ವಿ||

— ೦ —

# ಬದುಕಿನಲಿ....

ಬದುಕಿನಲಿ ಸಾರವಿಲ್ಲ. ಮನದಲಿ ಶಾಂತಿಯಿಲ್ಲ.
ನಿನ್ನ ಮುದ್ದು ಮೂರ್ತಿಯ ಪದಯುಗ್ಮಗಳಿಗೆ ಶಿರ
ಬಾಗಿ ನಮಿಸುವೆ ಸುಂದರಾಂಗ ಶ್ರೀಪುರುಷನೇ !

ಮೊದಲು ಜನನವರಿಯೆ. ಕಡೆಯಲಿ ಮರಣದ ಪರಿಯ
ನಾನರಿಯೆ. ನಡುವೆ ಮನುಜನೆಂಬ ಪೆರ್ಮೆಯ
ಕಿರೀಟವ ಪೊತ್ತು ಏನೆಂದು ಮೊರೆಯಿಡಲಿ ದೇವಾ ! ||ಬ||

ಬೀಯುವಾಗುವೀ ದೇಹದಲಿ ಘನವಂತ ನೀನು
ಇರುತಿರ್ದು ನಡೆದುದೆಲ್ಲ ನಿನ್ನಿಚ್ಛೆಯಂತೆ ಎನೆ
ಇನ್ನೆಲ್ಲಿ ಎನ್ನ ದುರಿತಂಗಳ್ ನೀ ರಕ್ಷಿಸೆಮ್ಮನು. ||ಬ||

— o —

## ಶ್ರೀ ಪರಮಾತ್ಮ....

ಶ್ರೀ ಪರಮಾತ್ಮ ಎನ್ನ ಮನೋವಲ್ಲಭ
ನಮ್ರತೆಯಿಂದ ನಮಿಪೆ ನಿನ್ನ ನಂಬಿ
ಭಯಭಕ್ತಿ ಪೂತ ಹೃದಯ ತುಂಬಿ.

ಜಗದೊಡೆಯ ಸಚ್ಚಿದಾನಂದ ರೂಪನಿಧಿ
ಮನ್ನಿಸೆನ್ನ ನಿನ್ನ ಕಾಲ್ಪಿಡಿದು ಪದ
ಧೂಳಿಯ ಧರಿಸಿ ಬೇಡುವೆ ಮುದದಿ
ಪರಾತ್ಪರನೆ ಪರಾಮರಿಸೆನ್ನ ದೀನೆಯೆಂದು. ||ಶ್ರೀ||

ಎನ್ನ ಮನವನ್ನೆ ಕಲಶವಗೈದು
ತುಂಬುವೆನು ಆನಂದಾಮೃತದಿಂದ
ನಿನ್ನ ಪದಯುಗ್ಮಗಳ ತೊಳೆತೊಳೆದು
ತೀರ್ಥಪಾನಗೈವೆನೋ ಮುಕುಂದ. ||ಶ್ರೀ||

— ೦ —

## ಪಾಡಿ....

ಪಾಡಿ ಪೊಗಳಲಳವೇ ಕಿರುಮತಿಯಲಿ ನಿನ್ನಯ
ಸುಗುಣ ಸಚ್ಚಾರಿತ್ರ್ಯ ಕಥನವನು ಶ್ರೀ ಹರಿಯೆ !
ಅಗಣಿತ ವೀರ ವಿಕ್ರಮ ವೇದಗಮ್ಯ ನೀನೆಂದು.

ನೀನಿಲ್ಲದೆ ಈ ಭವ್ಯ ಬ್ರಹ್ಮಾಂಡವುಂಟೇ ?
ನೀನಿಲ್ಲದೆ ಬಲೋನ್ಮತ್ತ ತ್ರಿಲೋಕವುಂಟೇ ?
ಸೃಷ್ಟಿ ಸ್ಥಿತಿಲಯಂಗಳು ನೀನಿಲ್ಲದಿನ್ನುಂಟೇ ?
ವೇದ ಪುರಾಣೇತಿಹಾಸದ ಬ್ರಹ್ಮಜ್ಞತೆ ನಿನ್ನ
ಸ್ವರೂಪವಲ್ಲದೆ ಬೇರುಂಟೇ ಪರಮಾತ್ಮ ! ||ಪಾ||

ನಿನ್ನ ಶಕ್ತಿ ಸಂಚಯನವನರಿಯದೆ ನಿನ್ನ ಘನ
ಮಹಿಮೆಯನರಿಯದೆ ದಿಕ್ಕು ತಪ್ಪಿನ ಪೆಣ್ಣೆನೆ
ನರಳುತಿಹೆ ಭವಧಿಯು ಘೋರ ಪಾತಕದಲಿ ಸಿಲ್ಕಿ
ಬಿಡುತೆಗಾಣೆನೊ ನಿನ್ನಡಿಯ ಸೇವೆಗೆ ಪರಮಾತ್ಮ
ದಾರಿ ತೋರೆನ್ನ ಕರಪಿಡಿದು ನಿನ್ನ ಪದತಲಕೆ. ||ಪಾ||

— o —

## ನೀನೊಲಿದ ಬಳಿಕ....

ನೀನೊಲಿದ ಬಳಿಕ ಪಾತಕವೆಂಬ
ಹೀನ ಕೃತಿ ಉಳಿವುದೇನೈ ತಂದೆಯೆ !
ಹೇ ದೇವಾಧಿದೇವ ನಮಿಪೆ ನಿನ್ನಯ
ಪಾದ ಪದ್ಮಗಳಿಗೆ ಸಂರಕ್ಷಿಸೆನ್ನನು.

ನಿನ್ನ ಪರಮ ಸೇವೆಯಲಿ ಕಾಲವ
ಕಳೆವೆನೆನೆ ಪಥವರಿಯೆನಯ್ಯ ನಿನ್ನ
ಅರಮನೆಯ ಪರಿಪುಣ್ಯ ಧಾಮಕ್ಕೆ,
ಪರಮಾತ್ಮ ಸಚ್ಚಿದಾನಂದ ರೂಪ ! ||ನೀ||

ನಿನ್ನ ಭಜಿಸಿ ಧ್ಯಾನಿಸಿ ನಾಗೈವ
ಸರಳರೂಪದ ಸೇವೆಯ ಸ್ವೀಕರಿಸಿ
ಎನ್ನ ಘೋರ ದುರಿತವನು ತೊಲಗಿಸಿ
ನೀನೇ ಕಾಪಿಡು ಪರಮಾತ್ಮರೂಪ ! ||ನೀ||

— ೦ —

## ವಂದಿಸುವೆ....

ವಂದಿಸುವೆ ನಿನಗೆ ದೇವದೇವನೇ
ಎನ್ನ ಅಜ್ಞಾನದ ಮೊದೆಗೆ ನಿನ್ನಯ
ಜ್ಞಾನದ ಕಿಡಿಸಿಡಿದು ಉರಿಯಲಿ ಸದಾ.
ತವ ಕೃಪೆಯಿಂದ ದುರಿತ ಕೋಟಿ ಹೊರೆಯು
ಉರಿದುರಿದು ಹೋಹ ತೆರದಲಿ ಪ್ರಭುವೇ !

ಎನಿತೆನಿತು ಭಂಗ ಬಣ್ಣಗಳಿಂದೆ
ಲೇಖಿಸಿದೊಡವಿಾಕೃತಿ ಎನ್ನದೆಂಬೆನೆ
ಎಲ್ಲವು ನಿನ್ನ ವರ ಕೃಪೆಯಲ್ಲದೆ
ಮತ್ತೇನಿಹುದು ? ತೋರು ಕರುಣೆಯ
ನಮಿಸುವೆನ್ನೈ ಭಕ್ತಿಯಿಂದ ಪ್ರಭುವೇ ! ||ವಂ||

ನಾನು ಕವಿಯಲ್ಲ ಲೇಖನದ ಸತ್
ಸಾಹಿತ್ಯವಿಾದು ನಿನ್ನಯ ಧ್ಯಾನದ
ದಿವ್ಯ ಸಾರವಲ್ಲದೆ ಬೇರಲ್ಲ ತಿಳಿಯೊ,
ನಿನ್ನ ನೇಮದಲಿ ಸಾಗೈದ ತಪದ
ಹುರುಳಿದೆಂಬೆನೀ ಸಾಹಿತ್ಯವ ಶ್ರೀಪ್ರಭುವೇ ! ||ವಂ||

— ೦ —

# ನಿನ್ನದಯಾ....

ನಿನ್ನ ದಯಾ ಭಿಕ್ಷೆಯನು ಬೇಡುವೆ
ಕೃಪೆದೋರಯ್ಯ ಮಹಾ ಪ್ರಭುವೇ!
ಭಾರತ ಧಾತ್ರಿ ಒಡಲ್ಗಿಚ್ಚಿನ ಕಠಿಣ
ಬೆಂಕೆಯಲಿ ಬೇಯುುತಿದೆ ಧಗಧಗಿಸಿ.

ಕಡಿದು ಕೊಚ್ಚುವರು ನೆರೆ ಸುಡುಗೋಲಿ
ಹಾರಿಸಿ ಸುಡುವರು ದೇಶೀಯರನು
ನಿರ್ದಯೆ ನಿರಾತಂಕ ಮನದಿಂದೆ!
ದಿನದಿನಂ ಘೋರ ರಕ್ತಾಕ್ತವಾಗುತೆ
ಪವಿತ್ರ ಭೂಮಿಯ ಪಾವಿತ್ರ್ಯ
ಕಳೆದು ಹೋಯಿತು ನೀನೆ ರಕ್ಷಿಸು ಹರಿಯೆ. ||ನಿ||

ಹೇಳಲಾರೆನೋ ತಾಳಲಾರೆನೋ
ನೊಂದು ನೋಯಲಾರೆನೋ ಶ್ರೀಹರಿಯೆ,
ನೀನೆ ಬಂದು ಉದ್ಧರಿಸು ನಿನ್ನಯ
ಜನ್ಮ ಭೂಮಿಯ ಪಾವಿತ್ರ್ಯವನು ನೀ
ಅವತರಿಸಿದಲ್ಲದೆಮಾಗದು ಆಗದು.
ನೀನ್ನೈದು ಸತ್ ಶಾಂತಿಯಂಬರಿಸು ಹರಿಯೆ. ||ನಿ||

— ೦ —

## ಬೊಮ್ಮಾಂಡದ....

ಬೊಮ್ಮಾಂಡದ ಭಾರ ಹೊತ್ತ ನಿನಗೆ ಈ ಬಡ
ಜೀವ ಭಾರವೆ ಪೇಳ್ ಶ್ರೀ ಜಗದೇಕನಾಥನೆ?
ಬೃಂದಾವನ ಪುಣ್ಯ ಘನಿಸಿ, ಮಾತೆ ದೇವಕಿಯ
ಪ್ರೇಮ ಪಣ್ತು ಜಗವ ಮರೆವರೆ ಎನ್ನ ಕೃಷ್ಣಯ್ಯ.

ರಕ್ತ ಮಾಂಸಗಳಿಂದ ಕೂಡಿ ರೋಮ ಕೂಪಗಳ
ತೊಗಲಿನ ಕೋಟೆಯನು ನಂಬಿ ಮರೆತೆನಯ್ಯ ನಿನ್ನ.
ರೋಗ ರುಜಿನಗಳ ರುದ್ರಪಾಶದಲಿ ಸಿಲ್ಕಿಹೆ
ಹೇ ಪರಮ ಜೀವೇಶನೇ ರಕ್ಷಿಸು ನಮ್ಮನನವರತ. ||ಬೊ||

ಬನ್ನ ಭಂಗಗಳ ಕಡಲಲಿ ಈಸಿ ಕಡುನೊಂದು
ನೋವುಂಡು ಬೇಸತ್ತು ನರಳುತಿಹೆ ನೀ ಬಂದು
ಪಾರು ಮಾಡೈ ನಿನ್ನನು ಕಾಲ್ಪಿಡಿದು ಬೇಡುವೆನು
ನಿನ್ನ ಹೇ ಜಗದೋದ್ಧಾರಕ ಪರಮಾತ್ಮನೇ! ||ಬೊ||

— o —

# ನಿಜ ವಿದ್ಯೆ....

ನಿಜ ವಿದ್ಯೆ ಬುದ್ಧಿಗಳಿಂ ಹೊರತಾಗಿ ಸದ್ಗುರುವ
ಕಾಣದೆ ಮತಿ ಹೀನತೆಯ ಹೀನ ಜಾಡ್ಯದಿಂದಲಿ
ಗತಿಗೆಟ್ಟು ಮುಂಗೆಟ್ಟು ಉಂಡಾಡಿಯಾದೆನಯ್ಯ.
ಕಳೆದುದೆನ್ನ ಕಾಲವು ಈಗೇಂಗೈಯ್ಯಲರಿಯೆ
ದೀನ ಬಂಧುವೆನಿಸಿದ ನೀನೆ ಸಂರಕ್ಷಿಸಯ್ಯ.

ಎನ್ನಂಥ ದೀನರಿರುತಿರಲಲ್ಲವೇ ನಿನಗೆ
ದೀನ ಬಂಧುವೆಂಬ ಹಿರಿಬಿರುದು ? ಇನ್ನೆನಗಿಂತ
ದೀನರಾರಿಹರಯ್ಯ ನಿನಗೆ ? ನೀನೆ ಕರುಣಾರಸವ
ಹರಿಸಿ ಸಂರಕ್ಷಿಸು. ಎನಗೆ ನೀನೇ ಗತಿಯೆಂತಂತು
ನಿನಗೆ ನಾನೇ ದೀನೆಯಲ್ಲದೆ ಬೇರಿಲ್ಲ ಹರಿಯೆ. ||೨||

ನಾನೆನಿತು ಪ್ರಯತ್ನಿಸಿದೊಡೆನ್ನಯ ಮನಸ್ಸು
ಒಲಿಯುತ್ತಿಲ್ಲ ನಿನ್ನೆಡೆಗೆ, ದುರ್ವಿಷಯಗಳಲ್ಲಿ
ಸೆರೆಸಿಲ್ಕಿ. ಪಾಪವಾಸನೆಯನ್ನ ನೀತೊಡೆದು
ಶುದ್ಧಿಗೊಳಿಸಲಾರೆಯಾ ಶ್ರೀಪುಂಡರೀಕಾಕ್ಷನೇ
ಎನ್ನ ನೀನಲ್ಲದೆ ಇಲ್ಲಿ ಕಾಪಿಡುವವರಾರು ? ||೨||

— ೦ —

# ರಾಮ ಸ್ತುತಿ

## ರಾಮಾ....

---

ರಾಮಾ ರಾಮಾಭಿರಾಮಾ ಸೀತಾ
ರಾಮ ಸಕಲ ಸದ್ಗುಣಧಾಮಾ
ನಿನ್ನ ಬೇಡುವೆನಯ್ಯ ಕೈಮುಗಿದು.

ಅಹಲ್ಯಾಶಾಪವಿಮೋಚನೆಗೊಳಿಸಿದ
ಪರಮ ಕರುಣಾನಿಧಿ ದಾಶರಥಿರಾಮ
ಕಾಸಲ್ಯಾನಂದನ ರಘುಕುಲ ಸೋಮ. ||ರಾ||

ನಿನ್ನ ಬೇಡುವೆನೊ ಕರಗಳ ಮುಗಿದು
ಎನ್ನ ದುರಿತಗಳ ಮನ್ನಿಸಿ ನೀನೇ
ಕರುಣೆದೋರಿ ರಕ್ಷಿಸೆಮ್ಮನು ಶ್ರೀರಾಮ ||ರಾ||

— ० —

# ಶ್ರೀರಾಮ....

ಶ್ರೀರಾಮ ರಘುರಾಮ ಜಯರಾಮ
ಕೃಪಾಳು ಪರಮಾತ್ಮನ ನೆನೆಮನವೇ.
ಅಯೋಧ್ಯಾಧಿಪತಿ ಜಾನಕೀರಮಣ
ರಾಮಾಭಿರಾಮನ ಭಜಿಸು ಮನವೇ.

ಸತ್ಕೀರ್ತಿ ಮಾಲಾಧರ ರಘುವೀರ
ಘನ ಶ್ಯಾಮ ಸುಂದರನ ನೆನೆಮನವೇ.
ಭಕ್ತ ಜನರ ಮನದಿಷ್ಟಾರ್ಥವ ಮಿಗೆ
ಸಲಿಸುವ ಲೋಕವಂದ್ಯನ ನೆನೆಮನವೇ. ||೩||

ಕಮಲಲೋಚನ ಅಮಿತ ವಿಕ್ರಮಗಮ್ಯ
ನೀನೆಂದು ಧ್ಯಾನಿಸುತ ನೆನೆಮನವೇ.
ಅನುದಿನವು ಸನ್ಮತಿ ಸುಗುಣಗಣವ
ಬೆಳೆಸಿ ವರ ಪಡೆಯೆ ನೆನೆಮನವೇ. ||೩||

— o —

# ಜೈಜೈ ರಘುರಾಮ....

ಜೈಜೈ ರಘುರಾಂ ಜೈಜೈಘನಶ್ಯಾಂ
ಜೈಜೈ ಸೀತಾರಾಂ ಜೈಜೈ ಶ್ರೀರಾಂ

ದೇವ ಜಗದಾಭಿರಾಮ ರಘುಕುಲ
ಪರಿಪಾವನ ಮೂರ್ತೆ ವೀರಾಗ್ರೇಸರ
ಬಾಲ್ಯದ ಚರಿತ್ರೆಯಲಿ ಲೋಕವನೆ
ಬೆರಗುಗೊಳಿಸಿದ ಜಗದೇಕ ವೀರವರ ! ||ಜೈ||

ವಿಶ್ವಾಮಿತ್ರ ವಶಿಷ್ಠರ ಪ್ರಿಯಶಿಷ್ಯ
ಘೋರ ಅಸುರರನು ಧ್ವಂಸಗೊಳಿಸಿದ
ನಿನ್ನಂಥ ಘನಮಹಿಮರ ಕಾಣೆನೀ
ಜಗದೊಳಗೆ ಕರುಣೆದೋರಿ ರಕ್ಷಿಸೆಮ್ಮ. ||ಜೈ||

ನಾನೇನು ಮಾಡಿದೊಡೇನು ? ನಿನ್ನಯ
ಚರಣಕಮಲಗಳ ಪರಮಧೂಳಿಯನು
ಪಡೆಯದಾದೆನೊ ದುರಿತಗಳ ರಾಶಿಯಿಂದ
ಸ್ವಾಮಿ ವೀನೊಲಿಯದನ್ಯ ಮಾರ್ಗವಿಲ್ಲ. ||ಜೈ||

— o —

# ಸದಾ ಮಾನಸ....

ಸದಾ ಮಾನಸ ಭಜನೆಯ ಮಾಡಬಾರದೇ ?
ರಘುವೀರನ ನೆನೆದು ಮನವ ತಣಿಸಬಾರದೇ ?

ಮೂಢರೊಡನೆ ಕೂಡಿ ಕೇಡಿಯಾಗದೆ ಮಾನಸ
ಪೂಜೆಯಮಾಡಿ ಪುಣ್ಯಪದವ ಗಳಿಸಬಾರದೆ ? ||ಸ||

ದೀನ ರಕ್ಷಕನ ಸಂಕೀರ್ತನದಲಿ ದಿವ್ಯಜ್ಞಾನಕೆ
ಅಡಿಗಲ್ಲನಿಟ್ಟು ಮುಹೂರ್ತಗೊಳಿಸ ಬಾರದೇ ? ||ಸ||

ಅನಂತಾನಂತನ ಭಜನೆ ಸಂತೋಷದಿಂದ
ಮಾಡಿ ಸನ್ಮಂಗಳ ಪದವನು ಪಡೆಯಬಾರದೇ ? ||ಸ||

ಭುವನದೊಡೆಯನೆನಿಪ ರಘುರಾಮನ ಧ್ಯಾನಿಸಿ
ಮನಮತಿಗಳ ಕ್ಲೇಶವನು ತೊಳೆದು ಕಳೆಯ ಬಾರದೇ ? ||ಸ||

— o —

# ಕೌಸಲ್ಯಾ ಹೃತ್ಕಲಶ....

ಕೌಸಲ್ಯಾ ಹೃತ್ಕಲಶ ಸಂಭವ ರಘುರಾಮು
ರವಿಕುಲ ಪರಂಜ್ಯೋತಿ ಜಾನಕೀ ಮನೋವಲ್ಲಭ
ಶ್ರೀ ರಘುರಾಮು ಜಯುಜಯು ರಾಮು.

ಘನ ಘೋರ ಕಾಂತಾರ ಚಿತ್ರಕೂಟ ನಿವಾಸ
ಅಜ್ಞಾನ ತಿಮಿರ ಮರ್ದನ ಕುಲಕೀರ್ತಿ ನಾಮಾ
ಶ್ರೀ ದಶರಥ ನಂದನ ಪರಿ ಪಾವನ ರಾಮಾ
ವಂದಿಸುನೆನೋ ಚೆಂದದಿಂದ ಹೇ ಲೋಕೇಶ. ||ಕೌ||

ನೀಲ ನೀಲಾಂಗ ದುರಿತ ತಿಮಿರ ಹರಣ ದಿವ್ಯ
ಕೀರ್ತಿ ಕಿರಣ, ಅನನ್ಯ ವರ ಕರುಣಾ ಪಾಂಗ
ಹನುಮ ಪ್ರಿಯ ಅಂಗದ ಮಿತ್ರ ಭವ್ಯ ಚಾರಿತ್ರ್ಯ
ಸದ್ಗುಣಗಳ ಸತ್ಪಾತ್ರ ವಂದಿಪೆನಯ್ಯ ನಿನಗೆ. ||ಕೌ||

ಅಕ್ಷಯಾಶ್ರಿತ ಪರಮ ಮೋಕ್ಷ ಪ್ರದಾಯಕ ಕಠಿಣ
ಕುಟಿಲ ಕುಮತಿಕುಠಾರ ಸಂಮರ್ದನ ಲಕ್ಷ್ಮಣಾನುಜ
ಸೀತಾಪತೆ ತಾಮರಸದಳನಯನ ದಯಾ ಘನ
ಶ್ರೀ ರಾಮ ಧಶರಥ ರಾಮ ಭಕ್ತಜನಾಶ್ರಿತ ರಾಮ ||ಕೌ||

— o —

## ಸತೀಮಣಿ....

ಸತೀಮಣಿ ಸೀತೆಗಳುಪಿದ ದುಷ್ಟ
ದುರಾತ್ಮನ ಬೆನ್ನಿನಲಿ ಬಂದ ಶಿಷ್ಟ
ವಿಭೀಷಣಗೆ ಅಭಯ ಹಸ್ತವ ತೋರ್ದು
ರಕ್ಷಿಸಿದ ದೀನರೊಡೆಯ ರಕ್ಷಿಸೆಮ್ಮನು.

ವೀರ ರಾವಣನೊಡನೆ ಹೋರಾಡಿ
ನಿಗ್ರಹಿಸಿ ಲೋಕ ಭಾರವ ತೊಡೆದು
ಜಗದೇಕ ವೀರನೆನಿಸಿದ ಧೀರ
ರಘುರಾಮ ದೀನರೊಡೆಯ ರಕ್ಷಿಸೆಮ್ಮನು. ||ಸ||

ಎಲ್ಲರಲಿ ನೀನಾಗಿ ಸುಜನರಿಗೆ
ಬಾಂಧವನಾಗಿ ದಾನವ ಜನರಿಗೆ
ಹಗೆಯಾಗಿ ಲೋಕ ಸಂರಕ್ಷಣೆಯನು
ಗೈದ ನಿಜ ದೀನರೊಡೆಯ ರಕ್ಷಿಸೆಮ್ಮನು ||ಸ||

— o —

## ಅಯೋಧ್ಯಾಪತಿ....

ಅಯೋಧ್ಯಾಪತಿ ಕೌಸಲ್ಯಾನಂದನ
ಶ್ರೀ ರಾಮನ ಪಾದ ಪೂಜೆಗೈಯುವಾ
ಬನ್ನಿರೋ ಎಲ್ಲ ಶ್ರೀರಾಮಧಾಮಕೆ.

ಪೊಗಳಲಳವೇ ಪುಣ್ಯ ಪುರುಷ ರಾಮನ
ಚರಿತೆಯನೀ ಕಿರು ನಾಲಿಗೆಯಲಿ ದೇವ।
ನಳಿನಾಕ್ಷನ ಕಣ್ತುಂಬ ಕಾಣುವಾ
ಬನ್ನಿರೋ ಎಲ್ಲ ಶ್ರೀರಾಮಧಾಮಕೆ. ||ಅ||

ಸತ್ಕವಿಗಳು ಸೋಲುವರು ರಾಮನ
ದಿವ್ಯ ನಾಮಾವಳಿಯ ಬಣ್ಣಿಸಲು
ಇನ್ನೆಂತು ಎನ್ನ ಬಣ್ಣನೆ ಪೇಳ್ ?
ಬನ್ನಿರೋ ಎಲ್ಲ ಶ್ರೀರಾಮ ಧಾಮಕೆ
ಕಣ್ತುಂಬ ನೋಡಿ ಮಣಿಯುವ. ||ಅ||

— o —

ರಾಂ ರಾಂ ಸೀತಾರಾಂ ರಾಂ ರಾಂ ದಶರಥರಾಂ
ರಾಂ ರಾಂ ರಘು ರಾಂ ರಾಂ ರಾಂ ಘನ ಶ್ಯಾಂ
ಎನು ಮನವೆ ಭಕ್ತಿಭಾವದಿಂದ ಎಡೆವಿಡದೆ.

ದಾಶರಥಿ ತ್ರೈಜಗದೀಶ ಸಂಕಷ್ಟ ನಿವಾರಣ
ಹರಿ ಸರ್ವೇಶ ದೇವೇಶ ಕೈವಲ್ಯ ಪತಿ ನೀನು.
ಪರಾತ್ಪರ ಶರಣಾಗತ ರಕ್ಷಕನೆಂಬ ದಿವ್ಯ
ಬಿರುದಿನ ಹಾರವನು ಧರಿಸಿದ ಜಾನಕೀ ಪ್ರಿಯ. ||ರಾಂ||

ಮಂಗಳಾತ್ಮಕ ಮಹಾ ಮಹಿಮನೆ ಮನನೊಂದು
ಬೇಡುತಿಹೆ ಕರವಿಡಿದು ನಡೆಸೆನ್ನ ದಯೆ ದೋರಿ
ಕತ್ತಲೆ ಗವಿಯಿಂದ ಬೆಳಕಿನ ಪರಮ ಪಥಕೆ
ನಾಗೈದ ಘೋರ ಅಪರಾಧಗಳ ಮನ್ನಿಸಿ. ||ರಾಂ||

— ೦ —

## ನಿಂತಲ್ಲಿ....

ನಿಂತಲ್ಲಿ ಕುಳಿತಲ್ಲಿ ಶ್ರೀರಾಮಾ ಎನಬಾರದೇ ?
ಕಾಯಕವ ಮಾಳ್ಪಲ್ಲಿ ಶ್ರೀರಾಮಾ ಎನಬಾರದೇ ?
ಪುಣ್ಯ ನಾಮನ ಭಜಿಸಿ ಪರಿಪುಣ್ಯ ಪಡೆಯಬಾರದೇ ?

ಬಾಲ್ಯದೊಳೆ ಲೋಕ ಕೀರ್ತಿ ಪಡೆದ ದಶರಥರಾಮ
ಪುಂಗವನ ತನ ಮನಗಳಲಿ ಪ್ರತಿಷ್ಟಿಸಿ ಭಜಿಸಿದರೆ
ಹರಿಯುವುದು ಘೋರ ಭವರೋಗ ದೂರ ಸಾರಿ.
ಎಡೆವಿಡದೆ ರಾಮ ನಾಮವ ಭಜಿಸು ಹೇ ಮನವೇ. ||ನಿಂ||

ಪೂರ್ವ ಜನ್ಮದ ಸಂಚಿತ ಪುಣ್ಯದಿಂದ ಮನುಕುಲ
ಪಡೆದ ಧನ್ಯತೆಗಾಗಿ ಸದಾ ನೆನೆ ನೆನೆ ಮನವೇ.
ಲೋಕದ ಲೋಗರಿಗೆ ಮೇಲ್ಪಂಕ್ತಿಯಾಗಿ ಆದರ್ಶ
ಜೀವನ ನಡೆಸಿದ ವರ ವೀರನ ಸದಾ ನೆನೆ ಮನವೇ. ||ನಿಂ||

— ೦ —

# ರಾಮಭಿರಾಮ....

ರಾಮಾಭಿರಾಮ ವರ ಸೀತಾರಾಮ.
ಕೌಸಲ್ಯಾನಂದನ ಶ್ರೀರಾಮ ದಶರಥ ರಾಮ.

ಗುರು ವಶಿಷ್ಠರ ಶಿಷ್ಯನಾಗಿ ಯಜ್ಞ ಯಾಗಾದಿಗಳ
ಸುಲಭ ಸಾಂಗಗೊಳಿಸಿದ ಪರಮ ವೀರಾಗ್ರೇಸರ. ||ರಾ||

ಧರಣೀಶ್ವರನಾಗಿ ರಾಜ್ಯವ ತೊರೆದು ಘನ ಘೋರ
ದಂಡಕಾರಣ್ಯದಲಿ ನೆಲೆಸಿದ ಮಹಾನ್ ತಾಪಸಿ. ||ರಾ||

ಅರವಿಂದಲೋಚನ ಭಕ್ತಜನ ಪರಿ ಪಾಲನ
ಜಾನಕೀ ಮನೋಹರ ಶ್ರೀ ಲಕ್ಷ್ಮಣಾಗ್ರಜ ||ರಾ||

— o —

# ಅಯೋಧ್ಯಾಪತಿ....

ಅಯೋಧ್ಯಾಪತಿ ಪರಮುದಾಶರಥಿ
ತ್ರೈಜಗದೀಶ ಸಕಲ ಗುಣವಂತ
ವಂದಿಸುವೆನು ನಿನ್ನ ತಲೆ ಬಾಗಿ
ಎನುತ ನಿರಂತರ ಭಜಿಸು ಮನವೇ.

ಶ್ರೀ ರಾಮಾಭಿರಾಮು ಜಯರಾಮು
ಸೀತಾರಾಮು ಸಚ್ಚಿದಾನಂದ ವರ
ಶಾಂತ ಸ್ವರೂಪ ರಣ ಧೀರ ರಾಮು
ಎನುತ ನಿರಂತರ ಭಜಿಸು ಮನವೇ. ||ಅ||

ಕಟು ಕಠಿಣ ಕುಟಿಲ ದುಷ್ಟಜನ ಶಿಕ್ಷಕ
ಸಿರಿವರ ಕುಮುದಾಕ್ಷ ದೇವಗಣ ನಮಿತ
ಕುಸುಮಾಕರ ಪರಮಾನಂದ ದಯಾನಿಧೆ
ಎನುತ ನಿರಂತರ ಭಜಿಸು ಮನವೇ. ||ಅ||

ಆನೆಂತು ಬಣ್ಣಿಸುವೆನು ನಿನ್ನಯ ಘನ
ಮಹಿಮೆಯನು ಶ್ರೀರಾಮು ಪ್ರಭುವೇ
ನೀನೇ ಸಂರಕ್ಷಿಸು ಕರುಣೆಯ ದೋರಿ
ಎನುತ ನಿರಂತರ ಭಜಿಸು ಮನವೇ. ||ಅ||

— ० —

# ಅನುದಿನವು....

ಅನುದಿನವು ಭಜಿಸು ಮನವೆ ನಂಬಿ ಭಜಿಸು ಮನವೆ.
ರಾಮರಾಮ ಸೀತಾರಾಮ ರಘುಪತಿ ರಾಮ
ಎನುತೆ ಎಡೆಬಿಡದೆ ಭಕ್ತಿಯಿಂದ ಭಜಿಸು ಮನವೆ.
ರಾಮನಾಮವೆ ಸಕಲ ನೋವುಗಳಿಗೆಲ್ಲ ತಾರಕ ಮಂತ್ರವು.

ಭಂಗ ಬನ್ನವ ಬಗೆ ಹರಿಸುವ ರಾಮನಾಮ.
ರೋಗ ರುಜಿನವ ಕಳೆದು ತೊಳೆವ ರಾಮನಾಮ.
ಪರಮ ಶಾಂತಿಯನು ನೀಡುವ ಶ್ರೀ ರಾಮನಾಮ.
ಸದಾ ದೀನ ದಲಿತರು ಸ್ಮರಿಸುವ ರಾಮನಾಮ. ||ಅ||

ಭಕ್ತ ಜನ ಪರಿಪಾವನ ದೀನ ರಕ್ಷಕ ಶ್ರೀರಘುರಾಮ.
ಹೃದಯ ಕಲಶದೊಳಗೆ ರಾಮನಾಮವ ತುಂಬಿ
ಧ್ಯಾನಿಸುತಿರೆ ಶ್ರೀ ರಾಮನಾಮವೆ ಸಿರಿ ಮದ್ದು
ಸಕಲ ಕಾರ್ಯ ವಿಧಾನಕೆ ಶ್ರೀ ರಘು ಕುಲ ಧಾಮ. ||ಅ||

— o —

# ಭಜಿಸು ಭಜಿಸು....

ಭಜಿಸು ಭಜಿಸು ಚಿರಕಾಲ ಭಜಿಸು
ಶ್ರೀರಾಮನ ಚರಿತವ ನಂಬಿ ಭಜಿಸು
ನಿತ್ಯ ಭಜಿಸು ಹೇ ಎನ್ನ ಮನವೇ.

ಲೋಕ ಪ್ರಿಯನ ಪರಮ ಪಾವನನ
ಸಕಲ ದುರಿತವ ಕಳೆದು ಈಡಾಡಿ
ಶಾಂತಿಯ ನೀವ ಶ್ರೀ ರಾಮನಾಮವ
ಜಪಿಸು ಮನವೇ ಜಪಿಸು ಜಪಿಸು. ||ಭ||

ಸತ್ಯ ಧರ್ಮಗಳ ಬಂಡಿಳಿಸಿ ಪರಮ
ಸತ್ಯ ಕಾಮನಾದ ದಶರಥರಾಮ
ಜೀವನ ದಾತ ವರ ಭಾಗ್ಯ ವಿಧಾತ
ರಘುರಾಮನ ಲೋಕ ಪ್ರಿಯತೆಯ ||ಭ||
ನಿತ್ಯ ಭಜಿಸು ಮನವೆ.

— o —

# ಜಯ ಜಯ....

ಜಯಜಯ ಪರಮಾತ್ಮ ಹರೆ ಜಯ ರಘುವೀರ ಹರೆ !
ಜಯ ಜಗ ಜೀವನ ಹರೆ ಜಯ ರಘು ರಾಮ ಹರೆ !

ಜಯ ಜಯ ಶ್ರೀರಾಮ ಜಯ ಜಗದಭಿರಾಮ
ತವ ದಿವ್ಯ ದರುಶನ ಭಾಗ್ಯವನು ನಾ ಬಯಸಿ
ನಗರಿಯಲಿ ಅಡವಿಯಲಿ ಅರಸರಸಿ ದಣಿದೆನು. ||ಜ||

ನಿನ್ನ ದೇಗುಲವೆ ಕಾಣದಾಯ್ತೆನ್ನ ಮಂದ
ಮಂದಾಕ್ಷಿಗೆ. ಮುಂಗಾಣದೆ ಅರಸುತಿಹೆ ನಿನ್ನ
ಕೇಳೆನ್ನ ದೀನ ಮನವಿಯ ಜಗದಭಿರಾಮ. ||ಜ||

ಮೂದಿನ ಬಾಳಿನಲಿ ಎನಿತೆಸಿತು ಭಂಗವನು
ತಂದೊಟ್ಟಿ ಕಂಬನಿ ಕೋಡಿಯನು ಹರಿಸಿದ್ಯೆ ಸ್ವಾಮಿ.
ತವ ಪಾದ ಸೇವೆಗೆ ಸಲಿಸೆನ್ನ ಶ್ರೀರಘುರಾಮ. ||ಜ||

— ० —

## ರಾಮು ನಾಮುವನು....

ರಾಮು ನಾಮುವನು ಜಪಿಸಿರೊ ಮನದಿ.
ನಾಮುನಲ್ಲದಿನ್ನುಂಟೆ ನಮುಗೆ ಭವದಿ.

ರಾಮುನೇ ದೈವ ರಾಮುನೇ ಧರ್ಮ
ರಾಮುನೇ ಸಚ್ಚಾರಿತ್ರ್ಯ ರಾಮುನೇ ಗುರು
ಎಂದು ನೆನೆಯಿರೊ ಬಾಳು ಬೆಳಗುವನಕ. ||ರಾ||

ರಾಮುರಾಮು ಜಯ ಸೀತಾರಾಮು
ರಘುತಿಲಕ ಕೌಸಲ್ಯಾರಾಮು
ದಶರಥನಂದನ ಜಾನಕೀ ರಾಮು. ||ರಾ||

ಗಾಳಿಗೊಡ್ಡಿದ ಸೊಡರು ಈ ಬಾಳು
ಇದನೆಮ್ಮ ದೈವವಮುರೆವರೆ ಪೇಳ್
ದೈವ ಸೇವೆಯು ಮಾಳ್ಪುದೆ ನಿಜಬಾಳು. ||ರಾ||

ಪರಮು ರಾಮುರಸ ಪಾನದಿಂದಲಿ
ತನುತುಂಬಿ ಮನತುಂಬಿ ಭಕ್ತಿಯಲಿ
ಪಾಡಿರೋ ಬಾಳಿನ ಕೊಳೆಯ ತೊಳೆಯಲು. ||ರಾ||

— ೦ —

# ತಾಯನಗಲಿದ....

ತಾಯನಗಲಿದ ತಬ್ಬಲಿಯ ಕಂಡು
ಕಾಣದಂತಿರುವರೆ ದೂರ ಮಾಡಿ
ಎಲ್ಲರಲಿ ನೀನಾಗೆ ನೆರಂಗೂಡಿ
ಪಾಲಿಸೆನ್ನ ದಯಾನಿಧೆ ದಯಮಾಡಿ. ||ತಾ||

ಜಯಜಯ ರಘುವೀರ ದಾಶರಥಿ
ಜಯಜಯ ಪರಮಾನಂದ ಪುಣ್ಯವಂತ
ಪೆಣ್ಣೆಂದು ಕೀಳ್ಗಯ್ದು ಮನಮರೆತು
ಅಲಕ್ಷಿಸದಿರು ಎನ್ನನು ಅನವರತ. ||ತಾ||

ಆದಿ ದೈವ ನೀ ದೀನ ಬಂಧುವೆನೆ
ಪ್ರಸಿದ್ಧಿ ಪಡೆದು ತೊರೆವರೆ ಎನ್ನ
ಕರುಣದಿಂ ಬೆಂಗಾಯ್ದು ಮುನ್ನಡೆಸೆನ್ನ
ಘನ ಮಹಿಮ ಸೀತಾರಾಮ ಚಂದ್ರನೆ. ||ತಾ||

— ೦ —

## ಲೋಕದೊಳ್....

ಲೋಕದೊಳ್ ಪತಿತೆಯಾಗಿ ನಿನ್ನ ಪದಯುಗ್ಮಗಳ
ಮರೆತು ಯುವ ಮದದಿಂ ಮೈಮರೆತು ಉಬ್ಬಿದೆನು
ಇನ್ನೆಂತು ಎನ್ನುದ್ಧರಣಮೋ ಹೇ ಪರಮಾತ್ಮನೇ.

ನಿನ್ನ ನೆರೆ ನಂಬಿ ನಡೆಯುತಿಹೆ ಎದೆ ಹಗುರಾಗಿ
ಆರಿಲ್ಲದಿರ್ದರೇಂ ನೀನಿರಲು ಎನ್ನ ಬಳಿಯಲ್ಲಿ
ಎಲ್ಲಿಯು ಭಯುವಯ್ಯ ಎನಗೆ ಶ್ರೀ ಪರಮಾತ್ಮನೆ. ||ಲೋ||

ನೀನೇ ಜಗದಾಭಿರಾಮ ನೀನೇ ಪರಂಜ್ಯೋತಿ
ನೀನೇ ಸಚ್ಚಿದಾನಂದ ಸ್ವರೂಪ ನೀನೆನ್ನ ಗತಿ
ಅರಿತು ಕಾಯಬೇಕೋ ಕೌಸಲ್ಯಾ ನಂದನನೇ ! ||ಲೋ||

— ० —

## ಒಂದೇ....

ಒಂದೇ ಒಂದೇ ಮನುಕುಲವೆಲ್ಲಾ ಒಂದೇ.
ಯೋಚಿಸಿ ನೋಡಿರಯ್ಯ ಬಂಧುಗಳೇ
ಮನುಕುಲಜರೆಲ್ಲ ಒಂದೇ. ಒಂದೇ.

ಮತ್ತೇಕಿಂತು ಜಾತಿ ನೀತಿಗಳಲಿ ಮೂಢ
ಹಂಬಲ ತೊಡೆಯಲಾಗದ ತುಮುಲವೇಕೆ ?
ಕಿರುಮನದ ಬಡಿದಾಟ, ಬಾಳಿನಲಿ
ಗೋಳಾಟವೇಕೆ ? ಬದುಕಿನಲಿ ಜಂಜಾಟ
ಏಕೆ ಬೇಕಯ್ಯ ಭವದಲಿ ಬಂಧುಗಳೇ. ||ಒಂ||

ಇನ ಶಶಿಗಳಿಗಾವ ಕುಲ, ಹರಿವ
ನದಿ ತೊರೆಗಳಿಗಾವ ಕುಲ, ಭವ್ಯ
ನದಿ ತೊರೆಗಳಿಗಾವ ಕುಲ ಯೋಚಿಸು ಮನವೇ.
ಶಿವನಿಗಾವ ಕುಲ ವಿಷ್ಣು ಬ್ರಹ್ಮರಾ
ಕುಲವಾವುದು ಹೇಳಿರಯ್ಯ ಬಂಧುಗಳೇ. ||ಒಂ||

ಜ್ವಲಿಸುವ ಬೆಂಕಿಗಾವ ಕುಲ, ಬೀಸಿ
ಬಹ ಅನಿಲನಿಗಾವ ಕುಲ ಬೃಹದ್
ಭೂ ಮಂಡಲದ ಕುಲವ ನೆನೆಯಿರೊ ಮನದಿ.
ಕುಲ ಕುಲವೆನುತೆ ಕ್ಷುಲ್ಲಕ ವಿಚಾರ
ಬೆಳಸದಿರಿ ಮನುಕುಲದ ದೇಶಿಗರೇ. ||ಒಂ||

— o —

# ದೇಶಭಕ್ತಿ ಗೀತೆ

## ತಾಯಿ ಭಾರತಿ....

---

ತಾಯಿ ಭಾರತಿ, ಅಪೂರ್ವ ಸೌಂದರ್ಯವತಿ
ನಿನ್ನಂತ ಮುದ್ದು ಪೆಸರ ಮಾನಿನಿಯನೆಲ್ಲೂ
ಕಾಣೆನಮ್ಮ ತಾಯಿ ಭಾರತಿ. ನೀನೆ ಸರಸತಿ.

ಭಾರತಿ ಭಾರತಿ ಭಾರತಿ ಎನೆ ಎಂತಹ
ಸವಿಯೊ ಅಂತಂತು ಭಾರತೀಯತೆಯು
ಸವಿ ಸಕ್ಕರೆವೆರೆಸಿದ ಕ್ಷೀರವಾರಿಧಿ. ||ತಾ||

ನಿನ್ನ ದಿವ್ಯ ಸಂಸ್ಕೃತಿವೆಸರಿನ ಮಾಲೆ
ವೇದ ಜನನಿ ಸಂಸ್ಕೃತ ಮಾತೆಯ ಶಾಲೆ
ಭಾರತಿ ಎನೆ ಮೈನವಿರು ನಿಮಿರುವುದು. ||ತಾ||

ಜಗದಾದ್ಯಂತ ಅರಸಿದೊಡಂ ಕಾಂಬುದೇಂ
ನಿನ್ನಂಥ ಸವಿರುಚಿಯಾದ ಅಪೂರ್ವ
ಅನನ್ಯ ಮುದ್ದು ಪೆಸರ ಜಪಸರ ಮಾಲೆ. ||ತಾ||

ತಾಯಿ ಭಾರತಿ, ನಿನ್ನ ಹೆಸರಿನ ದಿವ್ಯ
ಪರಿಮಳವೆಂತಂತು ನಿನ್ನ ಸಂಸ್ಕೃತಿಯು
ಅನಿತೆವಿರಿದು ಲೋಕ ಮಾನ್ಯತೆ ಪಡೆದು. ||ತಾ||

— ೦ —

## ಭಾರತವಿಂದು....

ಭಾರತವಿಂದು ಭಾರತವಾಗಿ ಉಳಿದಿಲ್ಲವೆನಲ್
ಒಡಲೆಲ್ಲ ಸುಡುವುದು ಸಂಕಟದ ಝುರಿ ಹರಿದು
ಕರುಳ ಬಳ್ಳಿಯು ನೋವು ತಾಳೆನೋ ಶ್ರೀ ಹರಿಯೆ.

ಮನುಕುಲದಲಿ ಮಚ್ಚರವು ಹೆಪ್ಪುಗಟ್ಟಿ, ದ್ವೇಷ
ರೋಷಗಳು ಜಡಿಗಟ್ಟಿ ಕೊಲೆಗಡುಕತನವೆ ಎಲ್ಲ.
ಭ್ರಾತೃಭಾವ ಇನಿತಿಲ್ಲ. ನೊಂದವರಲಿ ಕರುಣೆ
ದೋರ್ವರಿಲ್ಲ. ದುಃಖ ಸಂಕಟಗಳಿಗೆ ಮದ್ದಿಲ್ಲ.
ವೇದ ಭೂಮಿ ಪಾಪ ಪೂರಿತವಾಯ್ತು ಶ್ರೀ ಹರಿಯೆ. ||ಬಾ||

ಒಡಲ ಸಂಕಟವ ನೀ ಕಾಣೆಯಾ ಪರಮಾತ್ಮನೇ
ಈ ಧರ್ಮಭೂಮಿಯು ಉದ್ಧಾರ ನೀನಲ್ಲದೆ
ಮಾಳ್ಪರಿಲ್ಲ. ಸಂಭವಾಮಿ ಯುಗೇ ಯುಗೇ ಎಂದ ನಿನ್ನ
ಭರವಸೆಯ ನೀನೆ ಪಾಲಿಸಬೇಕಲ್ಲದೆಯೆ
ಬೇರಿಲ್ಲ ಹಿರಿದಾರಿ ಬಾರಯ್ಯ ಶ್ರೀ ಹರಿಯೆ. ||ಬಾ||

— ೦ —

## ಜನನಿ ಭಾರತಿ....

ಜನನಿ ಭಾರತಿ ವೇದ ಸ್ವರೂಪಿಣಿ
ಭಗವತೀ ವಂದಿಸುವೆ ಭಕ್ತಿಯಿಂದ.

ದಿವ್ಯ ಮಾನಿನಿ ನಿನ್ನಯ ಮಂಗಳ
ದ್ರವ್ಯ ಪೂಸಿತ ಸುಂದರ ವದನವ
ನೆನೆವುದೇ ಚೆಂದ. ನಿನ್ನ ಪೂಜಿಸಿ
ನಮಿಸುವುದೇ ಮನಕೆ ಒಂದಾನಂದ.

ಕನ್ಯಾಕುಮಾರಿಯಿಂದ ಹಿಮಾಲಯ
ಪರ್ಯಂತ ಹಬ್ಬಿದ ಪರಮ ರಾಷ್ಟ್ರದ
ಸುಸಂಸ್ಕೃತಿಯ ಶೀಲಾವನಿ ಮಾನಿನಿ
ಧವಳಾಂಬರ ಭೂಷಿತೆ ಭವಾನೀ. ||ಜ||

ಕೋಟ್ಯಾನುಕೋಟಿ ಮಕ್ಕಳ ಅಚ್ಚು
ಮೆಚ್ಚಿನ ಜನ್ಮದಾತೇ ಸಕ್ಕದ
ಸಕ್ಕರೆಯ ಅಕ್ಕರೆಯಿಂ ಪೋಷಿಸಿದ
ಪುಣ್ಯಾವನಿ ತಾಯಿ ಭಾರತೀ. ||ಜ||

ನಿನ್ನಂಥ ಸುಸುಂದರ ಸುಸಂಸ್ಕೃತ
ಭುವನದೇವಿ ಎಲ್ಲಿಹಳಮ್ಮ ಈ
ಧರಿತ್ರಿಯಲಿ ಇನ್ನೆಬರನಿನ್ನೊಬ್ಬರ
ಕಾಣೆ ತಾಯೆ, ಜನನೀ ಜನ್ಮದಾತೆ
ನಿನಗೆ ನಮೋನ್ನಮಃ. ||ಜ||

— ೦ —

# ಜೈಜೈ ಭಾರತ....

ಜೈಜೈ ಭಾರತ ಧಾತ್ರಿಗೆ ಜೈಜೈ ದಿವ್ಯ
ಮಾತೃಭೂಮಿಗೆ ಜೈಜೈ ವೇದ ಜನನಿಗೆ.

ಭಾರತ ಜನನೀ ಜನ್ಮದಾತೆಯೇ,
ಹರಸು ಬಾರೆಮ್ಮಯ ತಾಯಿಯೇ,
ಜ್ಞಾನ ವಿಜ್ಞಾನದ ಮುಂಬೆಳಕಿನಲಿ
ಮಿಾಯಿಸಿ ಮನಮತಿಯ ಬೆಳಗು ತಾಯೇ ! ||ಜೈ||

ಜನನೀ ಪರಮ ಭಾಗ್ಯ ದಾಯಿನೀ,
ಸತ್ಯ ಶಾಂತಿ ಶಿಸ್ತುಗಳ ಮಾಲಿನೀ,
ನಿತ್ಯ ಸಸ್ಯ ಶ್ಯಾಮಲ ರಾಗಿಣೀ,
ಕಸ್ತೂರಿ ಶ್ರೀಗಂಧ ಧಾರಿಣೀ ! ||ಜೈ||

— o —

## ಹೇ ತಾಯಿ....

ಹೇ ತಾಯಿ ಜಗಜ್ಜನನೀ ಭಾರತೀ
ವೇದ ಮಾತೆಯೆ ನಿನಗೆ ಶರಣೆಂಬೆ.

ನಿನ್ನ ಅಗಾಧವಾದ ವೇದಗಳ
ಸಾಗರದಮೃತ ಬಿಂದುವೆಮಗೆ
ನಿಲುಕದಾಗಿ ಬಾಳಿಗೆ ಬೆಳಕಿಲ್ಲ. ||ಹೇ||

ನೀನೆಲ್ಲ ನಿರ್ಲಕ್ಷಿಸದಿರು ತಾಯೆ
ದೀನಾರ್ತಳಾದೆನ್ನ ಹೃದಯದ
ಮೊರೆಯಲಾಲಿಸು ಭಾರತ ಮಾತೆಯೆ. ||ಹೇ||

ವಿವಿಧಧರ್ಮಗಳ ವಿವಿಧ ಭಾಷೆಗಳ
ವಿವಿಧ ಸಂಸ್ಕೃತಿಗಳ ಅದ್ಭುತ ಸಿರಿ
ಸಂಗ್ರಾಹಕಿ ಮಾತೆ ಭುವನೇಶ್ವರೀ. ||ಹೇ||

— ೦ —

# ಭಗಿನಿಯರೇ....

ಭಗಿನಿಯರೇ, ನೀವೆಲ್ಲರೂ ಬನ್ನಿ.
ಹರಿದ್ರಾ ಕುಂಕುಮ ಸುಶೋಭಿಸುವ
ಮಂಗಳ ದ್ರವ್ಯಗಳ ಸಹಿತ ಬನ್ನಿ.
ಭರತ ಮಾತೆಗೆ ಮಂಗಳವ ಹಾಡಿ
ಪಾಡಿ ನಲವಿಂ ಪೂಜಿಸುವ ಬನ್ನಿ. ||ಭ||

ಕತ್ತಿಯ ಹಿಡಿದು ವೀರರಾಗಿ ಬನ್ನಿ.
ರಕ್ತ ಬಸಿಯೆ ಹಿಂಜರಿಯದೆ ಬನ್ನಿ.
ಧೀರಗತಿಯಲಿ ಓಡಿಯೋಡಿ ಬನ್ನಿ.
ಯಾರೂ ಹಿಂದುಳಿಯದೆ ನುಗ್ಗಿ ಬನ್ನಿ.
ಶಾಂತಿ ಮಂತ್ರವ ಹಾಡಲು ಬನ್ನಿ. ||ಭ||

ದುಷ್ಟ ಮತಿಯ ಜಡಿ ಕುಟ್ಟಲು ಬನ್ನಿ.
ದುಷ್ಟ ಕೂಟವ ಬೊಗ್ಗು ಬಡಿಯೆ ಬನ್ನಿ.
ಭಾರತ ಮಾತೆಯ ಸೇವೆಗೈಯ ಬನ್ನಿ.
ಮಂದ ಮತಿಗಳ ಭಂಗಹರಿಸೆ ಬನ್ನಿ.
ಬಡ ಸತಿಯರ ಕಂಬನಿ ತೊಡೆಯೆ ಬನ್ನಿ. ||ಭ||

— ೦ —

# ಜಯ್ ಭಾರತ....

ಜಯ್ ಭಾರತ ಜಯ್ ಭಾರತ ಜನನೀ.
ನಮೋ ವೇದ ಮಾತೆ ನಮೋ ನಮೋ ಶ್ರೀಜನನೀ.

ದೀನ ದಲಿತರ ಮಾತೆ ಮಂಗಳ ಪ್ರೀತೆ
ದಿವ್ಯ ಸಂಸ್ಕೃತಿ ಪೂತೆ ಅಭಯದಾತೇ. ||ಜ||

ಗಿರಿ ವನ ನದಿ ಬಯಲುಗಳ ರುದ್ರಹಾರಿಣೀ.
ವೇದ ಋಷಿಗಳ ಹೃದಯ ಸಂಮೋದಿನಿ. ||ಜ||

ಸಸ್ಯ ಶ್ಯಾಮಲೇ ಪುಷ್ಪ ಮನೋಹರೆ.
ಭವ್ಯ ಬಂಧುರ ಧಾತ್ರೀ ವಿಶಾಲಿನೀ. ||ಜ||

ತಾಯೇ ಶ್ರೀಜನನೀ ತ್ರಿಲೋಕ ಮಾತೇ !
ಭಕ್ತಜನ ಮೋಕ್ಷಗತಿಯ ವಿಧಾತೇ ! ||ಜ||

— o —

## ಸೋದರಿಯರೆ....

ಸೋದರಿಯರೆ ನಲವಿಂ ನಲಿಯುವ ಬನ್ನಿ.
ಮೇದಿನಿಗೆತ್ತುವ ಮಂಗಳಾರತಿಯ ತನ್ನಿ.
ಬಗೆ ಬಗೆ ಹೂಗಳಿಂದ ಮಾಲೆಯ ಕಟ್ಟಿ
ವಿಧವಿಧ ಮಂಗಳ ದ್ರವ್ಯಗಳ ತನ್ನಿ.
ನಲವಿಂ ಪೂಜಿಸುವ ತೋಷವ ಸೂಸಿ.
ಒಲವಿಂ ವರವ ಪಡೆದು ಮನ ಮುದಿಸುವ. ||ಸೋ||

ಕೋಗಿಲೆ ಕಂಠದ ಉಲಿಯನು ಸೇರಿ
ಜಗದೊಡೆಯನ ಘನ ಮಹಿಮೆಯನು ಸಾರಿ
ಗೀತೆಗಳ ಹಾಡಿ ಪಾಡುತ ಒಲವಿಂ ಬನ್ನಿ.
ಭಾರತ ಮೋದವ ಮುದದಿಂದ ತನ್ನಿ
ಸೋದರಿಯರೆ ನಲವಿಂ ನಲಿಯುತ ಬನ್ನಿ,
ಮೇದಿನಿಗೆತ್ತುವ ಮಂಗಳಾರತಿಯ ತನ್ನಿ. ||ಸೋ||

— ೦ —

## ಭಾರತೀ....

ಭಾರತೀ ಶ್ರೀಮಾತೆ ಆನಂದ ಸುಖದಾತೆ.
ಹರಸು ಮಂಗಳಾಂಗಿ ಹಲವು ಮಕ್ಕಳ ಮಾತೆ.

ಎನಿತು ಇನಿದು ನಿನ್ನ ನುಡಿಯು ಮನಮೋಹನ ಸುಧೆಯು.
ಮೋಣೆನಿದು ನಿನ್ನಯ ಸುಸಂಸ್ಕೃತಿ ಸುರ ಭಾವನೆಯು. ||ಭಾ||

ಸಂಗೀತ ರಾಗರಸದ ಮಂಜುಳ ಕಳ ಕಂಠವು
ನಿತ್ಯ ನಿರಾತಂಕದ ಮೊಳಗು ಕಿವಿಗಳಿಗಿಂಪು. ||ಭಾ||

ಮಂದಮಾರುತ ಬೀಸಿವೀಸಿ ಬರೆ ಸುಯ್ಯನೆಯೆ
ಸುಯ್ಯುತ್ತ ರಾಗಧುನಿಯಾಗಿ ಹರಿವುದ ದಯೆ. ||ಭಾ||

ಔರಸ ಪುತ್ರರತ್ನರ ಪಂಚ ಪ್ರಾಣವಾಹಿನಿಯು
ಶ್ರಮ ಸಾಧನೆ ಕಿತ್ತ್ರೀಡಾಡಿತು ತವ ಶೃಂಖಲೆಯ. ||ಭಾ||

ಸುಪ್ರಭಾತದ ಪಕ್ಷಿಗಳಿಂಚರ ರಾಗ ಸುಧೆಯು
ನಿನ್ನಂಗ ಪ್ರತ್ಯಂಗಗಳ ಸ್ಫುಲ್ಲಿಂಗ ಲಹರಿಯು. ||ಭಾ||

ನೀನೆ ಪರಮದಾತೆ ಸುಸಂಸ್ಕೃತ ದೇವಮಾತೆ
ನಿನಗೆ ಶರಣು ಶರಣೆಂಬೆ ಹೇ ಭಾರತ ಮಾತೆ. ||ಭಾ||

— o —

## ಶ್ರೀಮಾತೆ....

ಭಾರತೀ ಶ್ರೀಮಾತೆ ಭುವನೇಶ್ವರಿ ಶಂಕರಿ
ನಮ್ಮ ಜನ್ಮದಾತೆ ವಿರಾಟ್ ವಿಶ್ವ ಮೋಹಿನೀ
ನಿನಗೆ ವಂದನೆ ವಿನಮ್ರ ವಂದನೆ.

ಭಕ್ತಿಯಿಂದ ಸೇವಿಸುವೆ ನಿನ್ನಯ ಪಾದಗಳ
ಲೋಕೇಶ್ವರಿ ಸುರಸುಂದರಿ ಶಾಂತಿ ದಾಯಕೀ.
ಸರ್ವ ಧರ್ಮ ಪ್ರದಾಯಿನಿ ನಿತ್ಯ ಸುಮಂಗಳೆ
ಜ್ಯೋತಿರ್ಮಯಿ ಸನಾತನಿ ಸರ್ವಜನೋದ್ಧಾರಕೀ. ||ಭಾ||

ವಿರಾಟ್ ವಿಶ್ವದೇಹಿನಿ ವರ ಶಕ್ತಿ ಸ್ವರೂಪಿಣಿ.
ನಿನ್ನ ವೇದ ಸಂಸ್ಕೃತಿಯ ಕೀರ್ತಿ ಜಗತ್ ಪರಿಮಳ
ಶತ ಸಹಸ್ರ ನೀತಿ ನಿಯಮಗಳ ಮಣಿಮಾಲಿನೀ
ತ್ರಿಭುವನ ಮೋಹಿನೀ ನಿನಗೆನ್ನ ನಮ್ರ ನಮನವು. ||ಭಾ||

— o —

## ಭಾರತಾಂಬಾ....

ಭಾರತಾಂಬಾ ಜಗದಂಬಾ ಭವಾನೀ
ಪರಿ ಪುಣ್ಯ ಜನನೀ ವರ ಬ್ರಾಹ್ಮಣೀ,
ವಂದಿಸುವೆ ನಿನಗೆ ಭಕ್ತಿಯಿಂದಲಿ.

ನಿನ್ನ ಮಡಿಲಲಿ ಸುಖ ತೋಷಗಳ
ಮೊಗೆದುಂಡು ನಿನ್ನ ಏಳ್ಗೆಗೆ ಕಂಕಣ
ಕಟ್ಟ ದೀಕ್ಷೆಯ ತೊಡದಿರುವರೆ ಪೇಳ್. ||ಭಾ||

ಗಿರಿವನ ನದಿಗಳ ಸಸ್ಯ ಶ್ಯಾಮಲಿನಿ
ತೊರೆಹೊಳೆ ವಾರ್ಧಿಗಳ ಸರಿತ್ ಸಾಗರಿ
ಮುನಿ ಋಷಿಜನ ಸಂಸೇವಿತ ಜನನೀ. ||ಭಾ||

ಸಮ ಶೀತೋಷ್ಣವಲಯ ಮಧು ಮಾಧುರೀ
ಸುಖೋಪಭೋಗ ಸಮಸ್ತ ಭಾಜಿನೀ
ಪುರಾಣ ಕವಿಕಾವ್ಯ ಪರಿಮಳ ಮೋದಿನೀ. ||ಭಾ||

— o —

## ತಾಯಿ ಭಾರತೀ....

ತಾಯಿ, ಭಾರತೀ ದಯಾಕಾರಿಣಿ
ಅಮಿತ ಹರ್ಷದ ಹೊನಲು ಹರಿಸಿ
ಹರಸೆಮ ಸದಾನಂದ ದಾಯಕೀ.

ನಂಬಿ ಬಂದ ಭಾಗ್ಯಹೀನ ಮಕ್ಕಳ
ಸರ್ವ ಸುಖದಾಯಕಿ ಸದಯೀ
ಪರಮ ಪ್ರಗತಿ ಗೀತ ಮೋದಕೀ. ||ತಾ||

ನಿತ್ಯ ನಿರಂತರ ಶಾಂತಿಪ್ರದ ಮೋಹನ
ಮಂತ್ರವ ಹಾಡಿ ಪೋಷಿತ ಜನನೀ,
ಭಾರತೀ ಜೀವದಯಾ ಕಾರಿಣೀ. ||ತಾ||

ನೀನೆ ಸಕಲ ಸಂಸ್ಕೃತಿ ಧರ್ಮಗಳ
ಸಂರಕ್ಷಕಿ ಅಭಯ ದಾಯೀ
ಪ್ರೇಮ ಭಿಕ್ಷಾ ಮೋದ ಮೋಹಿನೀ. ||ತಾ||

ಹಗಲು ಇರುಳು ದುಡಿಯುವ
ಕಾರ್ಮಿಕರ ಕಡು ಸಂಕಟದ
ಕಂಬನಿ ತೊಡೆವ ಪರಮ ತಾಯಿ. ||ತಾ||

ಭಾರತೀ ನಿತ್ಯ ಕ್ಷೇಮಂಕರೀ
ನೋವಿನಿಂದ ಸುಯ್ದು ಸುಯ್ಯುತ
ಬರುವ ಜನರ ಪ್ರಾಣ ಆಹ್ಲಾದಿನೀ. ||ತಾ||

— ೦ —

# ಮೊಲ್ಲೆ ಬನದ....

ಮೊಲ್ಲೆ ಬನದ ಸುಗಂಧ ಸೌರಭದ ಮೋಡಿಯಲಿ,
ಜಾಜಿ ಹೂಗಳ ಹೊನ್ನ ಹಳದಿಯ ರಂಗಿನಲಿ,
ಇತಿಹಾಸ ಪುಟಗಳ ಗತ ವೈಭವದ ವೇಶದಲಿ,
ಭಾರತ ಧಾತ್ರಿ ವೇದ ಜನನಿ ನಿನಗೆ ಶುಭಮಂಗಳಾ !

ಧೀಮಂತ ರಸ ಋಷಿಗಳ ಅಧ್ಯಾತ್ಮ ಯಜ್ಞದಲಿ,
ಕೇದಗೆ ಬನದ ಹೂಗಳ ಹರಿದ್ವರ್ಣದಲಿ,
ಕನಕಾಂಬರ ಕುಸುಮಗಳ ಕನಕ ಕಾಂತಿಯಲಿ,
ಭಾರತ ಧಾತ್ರಿ ವೇದ ಜನನಿ ನಿನಗೆ ಶುಭಮಂಗಳಾ ! ||ಮೊ||

ರವಿ ಶಶಿಗಳ ಉದಯಾಸ್ತ ಮಾನಗಳಲಿ,
ಸಕಲ ಪಕ್ಷಿ ಸಂದೋಹದ ಸುಪ್ರಭಾತದಲಿ,
ಮಹಾ ಪರ್ಣಾರ್ಣವದ ಹಚ್ಚ ಹಸುರಿನಲಿ,
ಭಾರತ ಧಾತ್ರಿ ವೇದಜನನಿ ನಿನಗೆ ಶುಭ ಮಂಗಳಾ ! ||ಮೊ||

ಜಲರಾಶಿಯ ಜುಳುಜುಳು ಮಂಜುಳ ಗಾನದಲಿ,
ಕೋಟಿಕೋಟಿ ನಕ್ಷತ್ರ ಖಚಿತಾಂಬರದಲಿ,
ಸರಸ್ವತಿಯ ಸಾಹಿತ್ಯ ಭಂಡಾರಗಳಲಿ,
ಭಾರತ ಧಾತ್ರಿ ವೇದಜನನಿ ನಿನಗೆ ಶುಭಮಂಗಳಾ ! ||ಮೊ||

— ೦ —

# ಹಿಮವಂತ....

ಹಿಮವಂತನ ಮಣಿ ಮುಕುಟದೆಡೆಯಿಂದ,
ನಿಚ್ಚ ವನಧಾತ್ರಿಯ ಸುಮ ಸಂದೋಹದೆಡೆಯಿಂದ,
ತೇಲಿ ಬಾ, ಮೂಡಿ ಬಾ ಬಾರೆಮ್ಮ ರಾಜ್ಯ ಜನನೀ,
ಒಲಿದು ಬಾ, ನಲಿದು ಬಾ ಬಾರಮ್ಮ ಸದಯೀ.

ಭೋರ್ಗರೆವ ಸಾಗರದ ತಡಿಯಿಂದ,
ಹಸುರು ಜೋಳದ ಹೊಲದೆಡೆಯಿಂದ,
ತಲೆದೂಗುವ ಶಾಲಿ ವನದೆಡೆಯಿಂದ,
ತೇಲಿ ಬಾ, ಮೂಡಿ ಬಾ ಬಾರಮ್ಮ ರಾಜ್ಯ ಜನನೀ,
ಒಲಿದು ಬಾ ನಲಿದು ಬಾ ಬಾರಮ್ಮ ಸದಯೀ. ||ಹಿ||

ಬೂಂದು ಬನದ ಹಚ್ಚ ಹಸುರಿನೆಡೆಯಿಂದ
ಚಹ ಬನದ ಹೊಚ್ಚ ಹೊಸ ತಳಿರಿನೆಡೆಯಿಂದ
ತೆಂಗು ಕೌಂಗುಗಳ ನೆತ್ತಿಯ ಮೇಲಿಂದ
ತೇಲಿ ಬಾ, ಮೂಡಿ ಬಾ ಬಾರಮ್ಮ ರಾಜ್ಯ ಜನನೀ
ಒಲಿದು ಬಾ ನಲಿದು ಬಾ ಬಾಬಾರಮ್ಮ ಸನಾತನೀ. ||ಹಿ||

— ೦ —

ಆಲಿಸಿ ಆಲಿಸಿ ಭಾರತ ಜನನಿಯು ಕರುಣಕತೆಯು
ದುಡಿಯುವ ಕೈಯೊಂದಾಗಿರೆ ಉಣ್ಣುವ ಬಾಯಿಗಳು
ಹತ್ತಿಪ್ಪತ್ತು : ಜಡತನವ ಜಡಿಯೆ ಏಳಿ, ಎದ್ದೇಳಿ !

ರಾಷ್ಟ್ರದ ಒಡಲು ದುಃಖದ ಕಡಲು, ಕೆನ್ನೆತ್ತರು
ಚೆಲ್ಲಿ ಸೂಸಾಡಿದ ಎಲುಬಿನ ಹಂದರ. ನಿಮ್ಮ ತಾಯ
ಸಂರಕ್ಷಣೆಯ ಸಂಯೋಜಿಸೆ ಏಳಿ, ಎದ್ದೇಳಿ ! ||ಆ||

ಕಿವುಡಾಗದಿರಿ ತಾಯ ಕೊರಳಿನ ಆರ್ತ
ಕರೆಗೆ, ಜಡ ನಿದ್ದೆಯ ಬದಿಗೊತ್ತಿ ದುಃಖಿನಿ
ಮಾತೆಯ ಕಂಬನಿ ತೊಡೆಯೆ ಏಳಿ, ಎದ್ದೇಳಿ ! ||ಆ||

ಗತಿಗೆಟ್ಟ ಧರ್ಮಕರ್ಮಗಳ ಹೊಣೆಯನು ಹೊತ್ತು
ಹೊಲಗೆಟ್ಟ ನ್ಯಾಯ ನೀತಿಗಳ ಹೊಳನು ಕಿತ್ತು
ನಿತ್ಯಾತ್ಮ ಶುದ್ಧಿಗೆ ಪವಿತ್ರ ಸ್ನಾನವ ಗೈದು
ಏಳಿರೋ ಏಳಿ, ಎದ್ದೇಳಿ ! ||ಆ||

— ೦ —

# ಮಲ್ಲಿಕಾ ಕೃತಿಗಳು

(ಕವಿತಾ ಸಂಕಲನ)

೨೮) ವಿಜಯ ಗಾಥಾ
೨೯) ಗಾನ ತೀರ್ಥ
೩೦) ನಾದ ಬಿಂದು
೩೧) ಕಾವ್ಯಾನಂದ ನಂದಿನಿ
೩೨) ಭಾವಾನಂದ ನಂದಿನಿ
೩೩) ಸಂಗೀತ ಪುಷ್ಪಾಂಜಲಿ
೩೪) ಆತ್ಮ ಗೀತಾಂಜಲಿ (ಅಚ್ಚಿನಲ್ಲಿ)

(ಸಂಜೀವನ ಕಾವ್ಯ)

೩೫) ಮಂಗಳ ಭಾರತಿ
೩೬) ಕಲ್ಯಾಣ ಭಾರತಿ
೩೭) ಉತ್ತರೋತ್ತರಣಿ
೩೮) ರಾಗಾನುರಾಗಿಣಿ
೩೯) ಪ್ರಫುಲ್ಲ ಭಾರತ

(ಪೌರಾಣಿಕ ನಾಟಕ)

೪೦) ಪುಣ್ಯಪಯೋನಿಧಿ
೪೧) ಪುಣ್ಯಾಭಿಸಾರ

(ಸಾನೆಟ್‌ಗಳು)

೪೨) ತರಂಗಿಣಿ

(ಗದ್ಯ ಕಾವ್ಯ)

೪೩) ಐಂದ್ರ ಕೀರ್ತಿ ಕೇತನಂ

(ಉಪನಿಷತ್ಕಥಾ)

೪೪) ಕೃತಂ ಸ್ಮರ ಕ್ರತುಂ ಸ್ಮರ

(ಶಿಶು ಸಾಹಿತ್ಯ)

೪೫) ದೂರ ದೇಶದಲ್ಲಿ
೪೬) ಬೆಳದಿಂಗಳ ರಾತ್ರಿ
೪೭) ರಂಗನ ಸಾಹಸ
೪೮) ಓಹಿಯೋಜ ಸರೋವರ
೪೯) ಕೌಶಿಕನ ಗೊಂಬೆ
೫೦) ವಿಶೇಷ ಸುದ್ದಿ
೫೧) ಕಲ್ಯಾಣಿ ರಾಗಿಣಿ

---

ಲಕ್ಷ್ಮೀ ಪ್ರಕಾಶನ
170, ಲ್ಯಾಂಗ್ ಫೋರ್ಡ್ ರೋಡ್, ಬೆಂಗಳೂರು–560 025